## 3

‘ಶ್ರೀ ಮದ್ವಾಯುಸ್ತುತಿ’ಯಲ್ಲಿ ಮೂಲತಃ ತ್ರಿವಿಕ್ರಮಾಚಾರ್ಯರಿಂದ 41 ಶ್ಲೋಕಗಳೂ, ಶ್ರೀ ಮಧ್ವಾಚಾರ್ಯರೇ ರಚಿಸಿದರೆನ್ನಲಾದ ಪ್ರಾರಂಭದ ಎರಡು ಸ್ತೋತ್ರಗಳೂ ಸೇರಿ ಒಟ್ಟು 43 ಶ್ಲೋಕಗಳುಂಟು. ಈ ಪ್ರಸಿದ್ಧ ವಾಯು ಸ್ತುತಿಯೊಂದಿಗೆ ಮಾಧ್ವ ಭಕ್ತರು ‘ಖಿಲವಾಯುಸ್ತುತಿ’ಯೆಂಬ ಹೆಸರಿನಲ್ಲಿರುವ ಸುಮಾರು 23 ಶ್ಲೋಕಗಳನ್ನು ಪಠಿಸುವ ಸಂಪ್ರದಾಯ ಉಂಟು. (ಜೀವಿ, ಈ ಭಾಗವನ್ನು ಅನುವಾದಿಸಿಲ್ಲ.)

‘ಪ್ರಾಣ’ ಶಬ್ದವು ಮುಖ್ಯಾರ್ಥದಲ್ಲಿ ಶ್ರೀಹರಿ ರೂಪಿ ಪರಬ್ರಹ್ಮನನ್ನೇ ಹೇಳುವುದೆಂದು ಬ್ರಹ್ಮಸೂತ್ರಗಳಲ್ಲಿ ಭಗವಾನ್ ವೇದವ್ಯಾಸರು ನಿರ್ಣಯಿಸಿದ್ದಾರೆ. ಸಾಮಾನ್ಯವಾದ ಪಂಚಭೂತಗಳಲ್ಲಿ ಒಂದಾದ – ವಾಯು, ಅಧಮ ಪ್ರಾಣನಾಗಿದ್ದಾನೆ. ಈ ದೃಷ್ಟಿಯಿಂದ ಮುಖ್ಯಪ್ರಾಣನೆಂದು ಹೆಸರಾದ ವಾಯು ದೇವರು ‘ಮಧ್ಯಮ ಪ್ರಾಣ’ರಾಗಿದ್ದಾರೆ. ಈ ಅರ್ಥದಲ್ಲಿಯೇ ಭೀಮ ದೇವರಿಗೆ ‘ಮಧ್ಯಪ್ರಾಣ’ನೆಂದು ಹೆಸರಿದೆ.

ಈ ಹಿನ್ನೆಲೆಯಲ್ಲಿ ವಾಯುಸ್ತುತಿಗೆ ಮೊದಲು ಶ್ರೀ ಲಕ್ಷ್ಮೀನೃಸಿಂಹ ಸ್ತುತಿಯನ್ನು ಶ್ರೀ ಮಧ್ವರು ರಚಿಸಿ ಸೇರಿಸಿದ್ದು ಅರ್ಥಗರ್ಭಿತವಾಗಿದೆ. (ಹರಿ – ಎಂದರೆ, ಸಿಂಹ, ಕಪಿ, ಅಶ್ವ, ಪ್ರಾಣ, ಸೂರ್ಯ ಎಂದೂ ಅರ್ಥವುಂಟು.)

ವಾಯುಸ್ತುತಿಯ 41 ಪದ್ಯಗಳಲ್ಲಿ ಹನುಮ, ಭೀಮ, ಮಧ್ವರ ಅವತಾರ ಸ್ವರೂಪ, ಕಾರ್ಯ ವೈಶಿಷ್ಟ್ಯ, ಅವರಲ್ಲಿರುವ ‘ಮುಖ್ಯ ಪ್ರಾಣತತ್ವ’ ಸ್ವರೂಪಗಳನ್ನು ಕವಿಗಳು ವರ್ಣಿಸುತ್ತ, ಹೆಜ್ಜೆ ಹೆಜ್ಜೆಗೆ ಅವರ ಜೀವೋತ್ತಮತ್ವವನ್ನೂ ಸರ್ವಜ್ಞತ್ವ, ಆನಂದ ಬಲತ್ವಗಳನ್ನು ಸ್ಪಷ್ಟ ಪಡಿಸುತ್ತಾರೆ. ಶ್ರೀ ಅರವಿಂದರು Super Mind – ವಿಜ್ಞಾನಮಯ ತತ್ತ್ವ – ಎಂದು ಹೇಳುವ ಮುಖ್ಯಪ್ರಾಣನು, ಸರ್ವದೇವತೆಗಳಿಗೂ, ಅಧಿಮಾನಸ ಸ್ವರ್ಗ, (over mind) ಹಾಗೂ ಅಪರೋಕ್ಷಿಕೃತ ಮನಸ್ಸಿನ (Spiritualised mind) ಶಕ್ತಿಗಳಿಗೂ ಸ್ಥಿರವಾದ ನೆಲೆಯೊದಗಿಸುತ್ತಾನೆ. ಛಾಂಧೋಗ್ಯ ಹಾಗೂ ಬೃಹದಾರಣ್ಯಕ ಉಪನಿಷತ್ತುಗಳು, ಮುಖ್ಯಪ್ರಾಣನೇ ದೇವತೆಗಳನ್ನು ಮೃತ್ಯುವಿನಿಂದ ಪಾರು ಮಾಡಿ ಆಖಣಾಶ್ಮನಾದನೆಂದು ಹೆಸರಾಗಿರುವದನ್ನು ಬಣ್ಣಿಸಿವೆ. ಈ ಮುನ್ನುಡಿಯ ಪ್ರಾರಂಭದ ಅವತರಿಣಿಕೆಗಳನ್ನು ಈ ದೃಷ್ಟಿಯಿಂದ ಗಮನಿಸಬೇಕು.

ತ್ರಿವಿಕ್ರಮ ಪಂಡಿತಾಚಾರ್ಯರು, ಶ್ರೀ ಮಧ್ವರನ್ನು, ಸರ್ವದೇವತಾಸಂಪೂಜ್ಯರೆಂದು ಸ್ತುತಿಸುವುದು ವೇದಸತ್ಯವಾಗಿದೆಯಲ್ಲದೆ, ಕೇವಲ ಸ್ವಗುರು ಹೆಗ್ಗಳಿಕೆಯಲ್ಲ. ಕಾವ್ಯಮಯ ಅಲಂಕಾರಗಳ ಹೊಳಪಿನಲ್ಲಿ ಈ ಸತ್ಯ ಕಣ್ಮರೆಯಾಗಬಾರದು.

**ಹರಿ ಸೇವೆಯಂತೆ ಗುರು ಸೇವೆಗೈಯೆ ಪರಮೋತ್ಸಾಹದಿಂದ**
**ದೇವತೆಗಳೆಲ್ಲ ದಿಟ ಮುಕ್ತರಾದರಜ್ಞಾನ ತಮಸಿನಿಂದ**
**ಪ್ರಾಜ್ಞಾತ್ಮಜ್ಞಾನವನ್ನು ಪಡೆದರಧಿಕ ಗುರುಪಾದ ಸೇವೆಯಿಂದ**
**ಅತಿಭಕ್ತಿಯಿಂದ ಉದ್ರೇಕಗೊಂಡು ಪಾದುಕೆಗೆ ತಲೆಯನಿಡಲು**
**ನವರತ್ನ ಖಚಿತ ಹೊನ್ಮುಕುಟ ಘಟ್ಟಿಸಲು ಕನಕ ರಜವು ಬರಲು**
**ಹೊಂಧೂಳಿ ಜೊತೆಗೆ ಗುರುಚರಣ ಧೂಳಿ ನಮ್ಮನ್ನು ರಕ್ಷಿಸಿರಲು** (ಪ.2)



ಕೈಗೆಟುಕದ ಆಧ್ಯಾತ್ಮಿಕತೆ, ಹಾಗೂ ಕೊಳೆಯ ಕೊಳವಾದ ಬದುಕುಗಳ ಮಧ್ಯೆ, ಜ್ಯೋತಿರ್ಮಯ ಸೇತುವೆಯಾದ ಮುಖ್ಯಪ್ರಾಣ ತತ್ವದರ್ಶನ ನೀಡಿದವರು ಶ್ರೀಮಧ್ವಾಚಾರ್ಯರು. ಅದು ಅವರ ಸ್ವರೂಪ. ಪವಿತ್ರ ಗಂಗೆಯನ್ನೇ ಮಲಿನಗೊಳಿಸಿದ ಚರಂಡಿಗಳ ನೀರಿನಂತೆ, ಜೀವಿಗಳ ಜೀವನಾಡಿಗಳನ್ನೆಲ್ಲ ಜನ್ಮಾಂತರದ ದುಷ್ಟ ಸಂಸ್ಕಾರಗಳು ಕಲುಷಿತಗೊಳಿಸುತ್ತವೆ. ದುರ್ಯೋಧನಾದಿಗಳು, ಈ ದುರ್ವಾಸನಾ ಸಂಕೇತಗಳಾಗಿದ್ದಾರೆ. ಭೀಮಸೇನ ದೇವರು ಇಂಥ ದುಷ್ಟ ಜೀವಿಗಳ ಊರೂಭಂಗ ಮಾಡಿ ಧರ್ಮಚೈತನ್ಯದ ವಿಜಯ ದುಂದುಭಿ ಮೊಳಗಿಸುತ್ತಾರೆ. ಇಂಥ ಭೀಮ ಪ್ರಜ್ಞೆಗೆ ಅಭಿವ್ಯಕ್ತಿ ನೀಡಿದ ಸ್ವತಃ ಭೀಮಾವತಾರಿಗಳಾದ ಶ್ರೀಮದಾನಂದತೀರ್ಥರನ್ನು ಕನ್ನಡ ನಾಡು–ಮಾನವತೆ–ಇನ್ನೂ ಅರಿತುಕೊಳ್ಳಬೇಕಾಗಿದೆ. ಕನ್ನಡ ಭಾಷೆಯಲ್ಲಿ ಪಂಪಭಾರತ, ರನ್ನಗದಾಯುದ್ಧ, ಕುಮಾರವ್ಯಾಸ ಭಾರತಗಳಂಥ ಮಹತ್ತರ ಕಾವ್ಯಕೃತಿಗಳು ರಚಿತವಾಗಿದ್ದರೂ, ಭೀಮತತ್ವದ ಮಹಿಮೆ, ಮಧ್ಯಮ ಪ್ರಾಣನ ರಹಸ್ಯ, ಸೌಗಂಧಿಕಾ ಪುಷ್ಪದ ಸಾಂಕೇತಿಕತೆಗಳು ಅರ್ಥಮಾಡಿಕೊಳ್ಳಲು ಕನ್ನಡ ವಿಮರ್ಶಕರು ಅಸಮರ್ಥರಾಗಿದ್ದಾರೆ. ದುರ್ಯೋಧನನನ್ನು ‘ಮಹಾನುಭಾವ’ ನನ್ನಾಗಿಸಿ, ಭೀಮದೇವರನ್ನು ‘ಹುಂಬ’ ನೆಂದು ಬಣ್ಣಿಸುವ ಹುಂಬಗುತ್ತಿಗೆ ಟೀಕೆ ಬರೆದಿದ್ದಾರೆ. ಈ ಹಿನ್ನೆಲೆಯಲ್ಲಿ ಜೀವಿಯ ಸೂಕ್ಷ್ಮ ಶರೀರದ ಕೊಳೆಯನ್ನೆಲ್ಲ ತಿಳಿಗೊಳಿಸಿ ಲಿಂಗ ಶರೀರ ಭಂಗಮಾಡುವ ಮಹಾಸತ್ವವು ಭೀಮದೇವರದೆಂದು ಸಾರಿದವರು ಶ್ರೀ ಮಧ್ವಾಚಾರ್ಯರು.

**ಕಾಂತೆ ದ್ರೌಪದಿಯ ಹಿಂದೆ ಬಯಸೆ ಸೌಗಂಧ ಕುಸುಮ ಜಾಲ**
**ತರಲು ಹೊರಟಾಗ ಮಾರ್ಗದಲ್ಲಿ ತಡೆದಿತ್ತು ಹನುಮ ಬಾಲ**
**ಎತ್ತಲಾಗದೇ ವೃದ್ಧ ಹನುಮರಾ ದಿವ್ಯ ರೂಪವನ್ನು**
**ಕಂಡು ಬೆದರಿ ನಮಿಸಿದನು ಭೀಮ, ತೋರಿದನು ಕ್ರೀಡೆಯನ್ನು**
**ಪೂರ್ಣಜ್ಞಾನದಿಂ ಕೂಡಿದಂಥ ಆನಂದತೀರ್ಥ ಇಂತು**
**ನಿನ್ನ ಎರಡು ಅವತಾರ ಲೀಲೆ ಅಜ್ಞರಿಗೆ ಮೋಹ ತಂತು** (ಪ.27)

ಇಲ್ಲಿ ಅಜ್ಞಾನಿಗಳಿಗೆ ಮೋಹ ಹುಟ್ಟಿಸಲು, ಭೀಮ ದೇವರು ಹನುಮಂತ ದೇವರಿಗೆ ಬೆದರಿದಂತೆ ನಟಿಸಿದ್ದು ಒಂದು ಲೀಲೆ ಎಂಬ ಭಾವ ಮುಖ್ಯವಾಗಿದೆ. ಮಧ್ವದರ್ಶನದಲ್ಲಿ, ಭಗವಂತನು, ಅಜ್ಞಾನಿಗಳನ್ನೂ, ದುಷ್ಟ ಆಸುರೀ ಚೇತನಗಳನ್ನೂ, ಉದ್ದೇಶಪೂರ್ವಕವಾಗಿ ಮೋಹಗೊಳಿಸುವುದು ಒಂದು ಮುಖ್ಯ ಪ್ರಮೇಯವೇ ಆಗಿದೆ. ಪರಮಾತ್ಮನಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ, ಆವೃತಿ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಂಬ ಅಷ್ಟಶಕ್ತಿಗಳಿದ್ದು, ಅವುಗಳಲ್ಲಿ ಅಜ್ಞಾನ, ಬಂಧ, ಆವೃತಿ ಎಂಬ ಶಕ್ತಿಗಳೂ ಇರುವುದನ್ನು ಶ್ರೀ ಮಧ್ವರು ಬ್ರಹ್ಮ ಸೂತ್ರಭಾಷ್ಯದಲ್ಲಿ ಎತ್ತಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಸೌಗಂಧಿಕಾ ಪುಷ್ಪ ದೊರಕಿಸುವ ಸನ್ನಿವೇಶವನ್ನು ವಿಮರ್ಶಕರು ಗಮನಿಸಬೇಕಾಗಿದೆ.

**ಭೀಮಸೇನ ಸಮೋನಾಸ್ತಿ ಸೇನಯೋರುಭಯೋಽರಪಿ**
**ಪಾಂಡಿತ್ಯೇಚ ಪಟುತ್ವೇಚ ಶೂರತ್ವೇಚ ಬಲೇಪಿಚ** (–ಖಿಲವಾಯುಸ್ತುತಿ)

(ಭೀಮಸೇನನಂತೆ ಕೌರವ ಪಾಂಡವರ ಸೈನ್ಯಗಳಲ್ಲಿ, ಪಾಂಡಿತ್ಯ, ಪಟುತ್ವ, ಶೂರತ್ವ ಬಲಗಳಲ್ಲಿ ಸಮಾನರಾದವರು ಯಾರೂ ಇರಲಿಲ್ಲ)

## 4

ಶ್ರೀಮಧ್ವರು, ವ್ಯಾಸದೇವರನ್ನು ಶ್ರೀ ಕೃಷ್ಣ ಪರಮಾತ್ಮನಿಂದ ಅಭಿನ್ನರೆಂದು ಉಪಾಸಿಸಿ, ವ್ಯಾಖ್ಯಾನಿಸಿದ್ದು ಇನ್ನೊಂದು ವಿಶೇಷ ಸಂಗತಿ. ಭೀಮಸೇನ ದೇವರಲ್ಲಿ ಈ ಅಖಂಡ ಪ್ರಜ್ಞೆ ಇತ್ತೆಂದು ಶ್ರೀಮದ್ವಾಯುಸ್ತುತಿ ಬಣ್ಣಿಸುತ್ತದೆ.-

**ನಿಜ ವ್ಯಾಸಕೃಷ್ಣರಲಿ ಭೇದವಿಲ್ಲ ದ್ವಿವಚನ ಏಕನಾಮ**
**ಇವರಿಬ್ಬರನ್ನು ಸೇವಿಸಲು ಬಂದ ಕುರುವಂಶ ಸೋಮ ಭೀಮ**
**ಬಿಳಿ ಕಮಲದಂತೆ ಶೋಭಿಸುವ ಕಣ್ಣು ಪಡೆದಿರುವ ನಿನಗೆ ನಮನ**
**ನಿತ ಭಕ್ತ ಜನರ ಸರಿ ಯೋಗಕ್ಷೇಮ ಗೈಯುವವು ನಿಮ್ಮ ಚರಣ.** (ಪ.26)

ಮಹಾಭಾರತದಲ್ಲಿ, ವೇದವ್ಯಾಸರನ್ನೂ, ಶ್ರೀಕೃಷ್ಣನನ್ನೂ ಏಕರೂಪದಲ್ಲಿ ಸೇವಿಸಲು ಭೀಮಾವತಾರವಾಗಿದೆ ಎಂಬ ವಿವೇಕವು ಕೇವಲ ಮಾಧ್ವ ಸಂಪ್ರದಾಯದಲ್ಲಿ ಎದ್ದು ಕಾಣುತ್ತದೆ.

ವೇದವ್ಯಾಸ ಹಾಗೂ ಶ್ರೀ ಕೃಷ್ಣರ ಅಖಂಡತ್ವದ ದರ್ಶನದ ಹಿಂದೆ ಬ್ರಹ್ಮಸೂತ್ರದ 'ಬ್ರಹ್ಮ' ಶಬ್ದದ ವ್ಯಾಖ್ಯಾನವೇ ಅಡಗಿದೆ.

**ನಾರಾಯಣಂ ಗುಣೈಃ ಸರ್ವೈಃ**
**ಉದೀರ್ಣಂ ದೋಷ ವರ್ಜಿತಮ್**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ**
**ನತ್ವಾ ಸೂತ್ರಾರ್ಥ ಉಚ್ಯತೇ**

(ಸಮಸ್ತ ಗುಣ ಪರಿಪೂರ್ಣನೂ, ದೋಷ ವರ್ಜಿತನೂ ಜ್ಞೇಯನೂ ಗಮ್ಯನೂ ಆದ ನಾರಾಯಣನಿಗೆ ಮತ್ತೂ (ಗುರೂನ್‌ಚಅಪಿ) ಗುರುವಿಗೂ ನಮಸ್ಕರಿಸಿ ಸೂತ್ರಾರ್ಥ ಹೇಳಲ್ಪಡುತ್ತದೆ)

ಶ್ರೀ ಮಧ್ವರ ಈ ಶ್ಲೋಕಾರ್ಥವನ್ನು ವಿವರಿಸುತ್ತ, ಶ್ರೀ ಜಯತೀರ್ಥರು 'ಗುರೂನ್‌ಚ ಅಪಿ' ಎಂಬ ಪದಗಳಲ್ಲಿಯ 'ಅಪಿ' ಶಬ್ದವು ಗುರು ಹಾಗೂ ಭಗವಂತರಲ್ಲಿಯ ಅಭಿನ್ನತೆಯನ್ನು ಸೂಚಿಸುವುದೆಂದು ಹೇಳಿದ್ದಾರೆ.

**ಸ್ವಸ್ಯ ಗುರುದೇವತಾ ಭೇದೇ ಅರುಚಿಂ**
**ಸೂಚಯತಿ ಅಪಿ ಪದೇನ**
**ಯದ್ಯಪಿ ಗುರುಃ ನ ದೇವತಾಭಿನ್ನಃ**
**ತಥಾಪಿ ವಿಶೇಷಾನುಗ್ರಹಾರ್ಥಂ**
**ಪೃಥಙ್ನಮತಿ** (-ತತ್ವಪ್ರಕಾಶಿಕಾ)

('ಅಪಿ' ಪದದಿಂದ ತಮ್ಮ ಗುರು ಮತ್ತು ದೇವತೆಗಳಲ್ಲಿ ಭೇದವನ್ನೆಣಿಸುವ ಬಗೆಗೆ ಅರುಚಿ ಇರುವುದನ್ನು ಸೂಚಿಸುತ್ತಾರೆ. ಗುರು ದೇವತೆಗಳಲ್ಲಿ ಅಭಿನ್ನತೆ ಇದ್ದರೂ ವಿಶೇಷಾನುಗ್ರಹಕ್ಕಾಗಿ ಬೇರೆ ನಮಸ್ಕರಿಸುತ್ತಾರೆ.)



ತ್ರಿವಿಕ್ರಮ ಪಂಡಿತಾಚಾರ್ಯರೂ ತಮ್ಮ ವಾಯುಸ್ತುತಿಯಲ್ಲಿ ವೇದವ್ಯಾಸರನ್ನು ವಿಶೇಷವಾಗಿ ಎರಡು ಶ್ಲೋಕಗಳಿಂದ ಸ್ತುತಿಸಿ, ಅವರ ಭಗವತ್ಸ್ವರೂಪವನ್ನೂ ಅವರ ಅವತಾರ ಕಾರ್ಯದ ವೈಶಿಷ್ಟ್ಯವನ್ನೂ ವರ್ಣಿಸಿದ್ದಾರೆ.

ಭಾವಿಬ್ರಹ್ಮರಾದ ಮಧ್ವಾಚಾರ್ಯರು ಸಜ್ಜನರ ಮೊರೆಯನ್ನು ಕೇಳಿ ನಾರಾಯಣನನ್ನು ಪ್ರಾರ್ಥಿಸಿದಾಗ ಆತನೇ-

**ಪರಾಶರನ ಸತಿ ಸತ್ಯವತಿಯಲ್ಲಿ ವ್ಯಾಸನಾಗಿ ಬಂದ**
**ದೇಹದಿಂದಲ್ಲ, ಜ್ಞಾನ ಜ್ಯೋತಿ ಅವತಾರಗೊಂಡು ನಿಂದ** (ಪ.36)

ಸಂಸ್ಕೃತ ಮೂಲದಲ್ಲಿ ವೇದವ್ಯಾಸರ ದೇಹವನ್ನು 'ಚಿನ್ಮಾತ್ರ ಮೂರ್ತಿ' ಎಂದು ವರ್ಣಿಸಿ, ಅವರ ದೇಹವು 'ಪ್ರಾಕೃತ'ವಲ್ಲವೆಂದು ಹೇಳಿದ್ದಾರೆ. ಪರಮಾತ್ಮನು ಸಾಕಾರನೇ ನಿರಾಕಾರನೇ ಎಂದು ದೊಡ್ಡ ವಾದವಿವಾದವಿದೆ. ಆದರೆ ಶ್ರೀಮಧ್ವರು ಈ ವಾದವಿವಾದಕ್ಕೆ ಮಂಗಳ ಹಾಡಿದರು. ಪರಮಾತ್ಮನು ನಿರಾಕಾರನೆಂದರೆ, ಸತ್ವ, ರಜ, ತಮಗಳೆಂಬ ಗುಣಯುಕ್ತವಾದ ಪ್ರಕೃತಿಯಿಂದಾದ ಶರೀರ ಇಲ್ಲದವನೂ ಅವ್ಯಕ್ತನೂ ಎಂದರ್ಥ. ಸಾಕಾರನೆಂದರೆ ಕರುಣೆಯಿಂದ ಪ್ರಕಟವಾಗುವ ಸತ್,ಚಿತ್, ಆನಂದಾತ್ಮಕ ಗುಣ ಶರೀರಿ ಎಂದರ್ಥ. ಶ್ರೀಜಯತೀರ್ಥರೂ ಇದೇ ಭಾವವನ್ನೇ ತತ್ವ ಪ್ರಕಾಶಿಕೆಯಲ್ಲಿ-

**ಶುದ್ಧಾನಂದೋರು ಸಂವಿದ್ದ್ಯುತಿಬಲ ಬಹುಲೌದಾರ್ಯ ವೀರ್ಯಾದಿ ದೇಹಂ**

(ಮುಕುಂದನು) - ಶುದ್ಧ ಆನಂದ, ಪೂರ್ಣಜ್ಞಾನ, ದ್ಯುತಿ, ಬಲ, ಅನಂತ ಔದಾರ್ಯ, ವೀರ್ಯಾದಿ (ಗುಣ) ದೇಹವುಳ್ಳವನು.)

ಎಂದು ವರ್ಣಿಸಿದ್ದಾರೆ.

ತ್ರಿವಿಕ್ರಮ ಪಂಡಿತಾಚಾರ್ಯರು 'ಚಿನ್ಮಾತ್ರ ಮೂರ್ತಿ' (ಕೇವಲ ಚಿತ್-ಜ್ಞಾನಮೂರ್ತಿ) ಎಂದು ಬಣ್ಣಿಸಿರುವುದನ್ನು ಜೀವಿಯವರು 'ಜ್ಞಾನಜ್ಯೋತಿ ಅವತಾರಗೊಂಡು ನಿಂದ' ಎಂದು ಕನ್ನಡಿಸಿದ್ದಾರೆ.

ಇಂಥ ಚಿನ್ಮಾತ್ರ ಮೂರ್ತಿಯಾದ ವೇದವ್ಯಾಸರು ಭಗವಂತನಲ್ಲದೆ ಇನ್ನಾರೂ ಅಲ್ಲವೆಂದು ಇನ್ನೊಂದು ಶ್ಲೋಕದ ಮೂಲಕ ಸ್ತುತಿಸುತ್ತ, ಅವರ ಅವತಾರ ಕಾರ್ಯದ ವೈಶಿಷ್ಟ್ಯವನ್ನು ತ್ರಿವಿಕ್ರಮಾಚಾರ್ಯರು ಸ್ಪಷ್ಟಗೊಳಿಸುತ್ತಾರೆ.-

**ರತ್ನರಾಶಿಯನು ಕುರುಡು ಜನರು ತಪ್ಪಾಗಿ ಚಯಿಸುವಂತೆ**
**ಅಧಮ ಜನರು ವೇದಾರ್ಥವನ್ನು ತಪ್ಪಾಗಿ ಗ್ರಹಿಸೆ, ಅಂತೆ**
**ತಾನೆ ಮೂಲಗುರು ವೇದವ್ಯಾಸ ಸಜ್ಜನರ ಹಿತವ ಬಯಸಿ**
**ಶ್ರುತಿಯ ಸರಿ ಅರ್ಥ ಜಗಕೆ ತಿಳಿಸಿದನು ಬ್ರಹ್ಮಸೂತ್ರ ರಚಿಸಿ**
**ಮುಖ್ಯಪ್ರಾಣನಾ ಕೃಪೆಯ ಬಲದಿಂದ ವ್ಯಾಸರನ್ನು ಭಜಿಪೆ**
**ಜ್ಞಾನಲಭಿಸೆ ಗುರು ವ್ಯಾಸರನ್ನು ಪ್ರತಿನಿತ್ಯ ನಾನು ನಮಿಪೆ** (ಪ. 37)

(ಕುರುಡರು ರತ್ನರಾಶಿಯನ್ನು ಅಸ್ತವ್ಯಸ್ತವಾಗಿ ಪೋಣಿಸುವಂತೆ ಅಧಮ-ಅಜ್ಞಾನಿಗಳು ವೇದಾರ್ಥವನ್ನು ವಿಪರೀತವಾಗಿ ಗ್ರಹಿಸಿದಾಗ, ತಾವೇ ಮೂಲಗುರುವಾದ (ಗುಣಗಣ ನಿಲಯರಾದ) ವೇದವ್ಯಾಸರು, ಸಜ್ಜನರ ಹಿತ ಬಯಸಿ ಶ್ರುತಿಯ ಅರ್ಥವನ್ನು ಬ್ರಹ್ಮಸೂತ್ರಗಳನ್ನು ರಚಿಸುವ ಮೂಲಕ ತಿಳಿಸಿದರು. ಅಂಥ ವೇದವ್ಯಾಸರನ್ನು, ಮುಖ್ಯಪ್ರಾಣನ ಕೃಪಾಬಲದಿಂದ ಜ್ಞಾನ ಪ್ರಾಪ್ತಿಗಾಗಿ ಭಜಿಸುತ್ತ ನಮಿಸುತ್ತೇನೆ.)

ಮೂಲ ಸಂಸ್ಕೃತದಲ್ಲಿ 'ಗುರುತಮಂ ಅಗುರುಂ ದೇವದೇವಂ' ಎಂದಿರುವುದನ್ನು ಜೀವಿ, 'ಮೂಲಗುರು' ಎಂದು ಸಂಗ್ರಹಾನುವಾದ ಮಾಡಿದ್ದಾರೆ. ಮೂಲದ 'ಅಗುರು' ಎಂದರೆ ತನಗೆ ಬೇರೆ ಯಾರೂ ಗುರು ಇಲ್ಲದವನು ಅಂದರೆ ವಿಶ್ವಕ್ಕೆ ತಾನೊಬ್ಬನೇ ಗುರು ಎಂದರ್ಥ.

ಮಾಧ್ವರಲ್ಲಿ ಭಗವಾನ್ ವೇದವ್ಯಾಸರ ಬಗೆಗೆ ಇರುವ ತಿಳುವಳಿಕೆ, ಇನ್ನೂ ಸಾರ್ವತ್ರಿಕವಾಗಿ ಪ್ರಸಾರಗೊಳ್ಳಬೇಕಾಗಿದೆ. ಏಕೆಂದರೆ ಭಾರತ ಬರೆದು ತೃಪ್ತರಾಗದೆ, ವೇದವ್ಯಾಸರು ದುಃಖಿಗಳಾಗಿದ್ದರೆಂದೂ, ಪುತ್ರ ಶುಕ ಮಹರ್ಷಿಗಳ ವಿರಹದಿಂದ ಮೋಹಪರವಶರಾಗಿದ್ದರೆಂದೂ ಹೇಳುವ ಭಾಗವತದ ಕತೆಗಳಿಂದ, ವೇದವ್ಯಾಸರ ಭಗವತ್ ಸ್ವರೂಪ ಅನೇಕರಿಗೆ ಹೊಳೆಯದೆ ಹೋಗುತ್ತದೆ. ಶ್ರೀ ಕೃಷ್ಣನು ಭಗವದವತಾರವೆಂದೂ, ವೇದವ್ಯಾಸರು, 'ಅಪಾಂತರತಮ'ನೆಂಬ ಋಷಿಯ ಅವತಾರವೆಂದೂ ಕಲ್ಪನೆ ಇದೆ. ಆದರೆ ಶ್ರೀ ಮಧ್ವರು ಋಗ್ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ.-

**ಹೃದಿಸ್ಥೋ ಬಾದರಾಯಣಃ । ಓಂಕಾರಪೂರ್ವಿಕಾ**
**ವಿದ್ಯಾಃ ಪ್ರೇರಯತ್ಯಖಿಲೇಷ್ವಪಿ।**
**ಸದೈವ ಬ್ರಹ್ಮಣೇ ಪೂರ್ವಮಿತಿ ಸಾತ್ವತ ಸಂಹಿತಾ**

(ಹೃದಯದಲ್ಲಿರುವ ಬಾದರಾಯಣರು (ವೇದವ್ಯಾಸರು) ಓಂಕಾರವೇ ಆದಿಯಾಗಿರುವ ಸಮಸ್ತ ವಿದ್ಯೆಗಳನ್ನು ಎಲ್ಲರಿಗೂ ಪ್ರೇರಿಸುತ್ತಾರೆ. ಅದರಲ್ಲಿಯೂ ಬ್ರಹ್ಮದೇವರಿಗೆ ಮೊದಲು ಉಪದೇಶಿಸುತ್ತಾರೆ. ಹೀಗೆ 'ಸಾತ್ವತ ಸಂಹಿತೆ' ತಿಳಿಸುತ್ತದೆ.)

## 5

ಶ್ರೀ ಮಧ್ವ ಸಿದ್ಧಾಂತದಲ್ಲಿ ದ್ವೇಷಭಕ್ತಿಗೆ ಸ್ಥಾನವಿಲ್ಲ. ಭಕ್ತನು ಸದಾ ಭಗವತ್ ಪ್ರೇಮಿ. ಅವನಲ್ಲಿ ಅಸುರಾವೇಶವಿದ್ದಾಗ ಆ ಅಸುರನೇ ಭಗವಂತನನ್ನು ದ್ವೇಷಿಸಿ ನರಕ ಹೊಂದುತ್ತಾನೆ. ಆ ಭಕ್ತನಲ್ಲಿರುವ ಸುಜೀವಿಯು ಭಗವತ್ ಕರುಣೆಯಿಂದ ಮುಕ್ತಿ ಹೊಂದುತ್ತಾನೆ. ಶ್ರೀಮಧ್ವಾಚಾರ್ಯರ ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಇದು ಅತ್ಯಂತ ಮಹತ್ವದ ಅಂಶವಾಗಿದ್ದು, ಇಂದಿಗೂ ಈ ಸತ್ಯಾಂಶವನ್ನು ಪುರಾಣಪ್ರೇಮಿಗಳು ಗ್ರಹಿಸಿಲ್ಲ. ಕಾಮಕ್ರೋಧದ್ವೇಷಾದಿಗಳು ಚಿತ್ತೈಕಾಗ್ರತೆಯನ್ನುಂಟು ಮಾಡುವುದರಿಂದ ಅದರಿಂದಲೂ ಭಗವತ್ ಸಾಕ್ಷಾತ್ಕಾರವಾಗಿ ಮೋಕ್ಷ ಪ್ರಾಪ್ತಿಯಾಗುವುದೆಂಬ ತಪ್ಪುಭಾವನೆ ಪ್ರಬಲವಾಗಿದೆ. ಆದರೆ ಮೋಕ್ಷಕ್ಕೆ ಪ್ರೇಮರೂಪಿ ಭಗವದ್ಭಕ್ತಿಯೇ ಏಕೈಕ ಕಾರಣ. ನಿಜವಾಗಿ ಪ್ರೇಮಸ್ವರೂಪವೂ, ಸ್ವಾನಂದಸ್ವರೂಪವೂ ಆಗಿರುವುದೇ ಭಕ್ತಿ. ಜನ್ಮಜನ್ಮಾಂತರಗಳಿಂದ ಈ ದಿವ್ಯ ಸ್ವರೂಪ-ಆನಂದವೇ ವಿಕಾಸ ಹೊಂದುತ್ತಿರುತ್ತದೆ.



**ಪರಮೇಶ್ವರ ಭಕ್ತಿರ್ನಾಮ**
**ನಿರವಧಿಕಾನಂತಾನವದ್ಯ ಕಲ್ಯಾಣ ಗುಣತ್ವ**
**ಜ್ಞಾನಪೂರ್ವಕಃ**
**ಸ್ವಾತ್ಮಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕೋ**
**ಅಂತರಾಯ ಸಹಸ್ರೇಣಾಪ್ಯಪ್ರತಿಬದ್ಧೋ**
**ನಿರಂತರ ಪ್ರೇಮ ಪ್ರವಾಹಃ**

(ಶ್ರೀ ಜಯತೀರ್ಥರು ತಮ್ಮ 'ನ್ಯಾಯಸುಧಾ' ಗ್ರಂಥದಲ್ಲಿ ಅನುಪಮವಾಗಿ, ಭಕ್ತಿಯ ಲಕ್ಷಣವನ್ನು ಹೀಗೆ ವಿವರಿಸಿದ್ದಾರೆ. -

ಪರಮೇಶ್ವರ ಭಕ್ತಿ ಎಂದರೆ -

ನಿರವಧಿಕವೂ, ಅನಂತವೂ, ದೋಷ ರಹಿತವೂ ಆದ ಕಲ್ಯಾಣ ಗುಣತ್ವದ ಜ್ಞಾನದಿಂದ ಕೂಡಿದ, ತನ್ನ ಆತ್ಮ ಹಾಗೂ ತನ್ನ ಇತರ ಸಮಸ್ತ ವಸ್ತುಗಳಿಗಿಂತಲೂ ಅನೇಕ ಗುಣ ಅಧಿಕವೂ ಸಹಸ್ರಾರು ವಿಘ್ನಗಳಿಂದಲೂ ತಡೆದು ನಿಲ್ಲದ ನಿರಂತರ ಪ್ರೇಮ ಪ್ರವಾಹವಾಗಿದೆ.

ಇಂಥ ಭಕ್ತಿಯು ಮುಕ್ತಿಯ ಜೀವಾಳವಾಗಿರುವುದರಿಂದ, ಮುಕ್ತಿಯೋಗ್ಯ ಜೀವಿಯ ಸ್ವರೂಪವೇ ಆಗಿರುವುದರಿಂದ ಭಗವದ್ವೇಷವು ಮುಕ್ತಿಗೆ ನೇರ ಕಾರಣವಾಗಲಾರದು. ಈ ಅಂಶವನ್ನು ಮಾಧ್ವರು ಅತ್ಯಂತ ಖಚಿತವಾಗಿ ಪ್ರತಿಪಾದಿಸುವುದರಿಂದಲೇ, ವಿಷ್ಣು ದ್ವೇಷವನ್ನೂ ಅಷ್ಟೇ ಉಗ್ರವಾಗಿ ಪ್ರತಿಭಟಿಸುತ್ತಾರೆ. ಈ ಹಿನ್ನೆಲೆಯಲ್ಲಿ ವಾಯುಸ್ತುತಿಯ ಈ ಪದ್ಯವನ್ನು ಅರ್ಥೈಸಬೇಕು.

**ಮುಪ್ಪು ಗೆದ್ದ ದೇವತೆಗಳಲ್ಲಿನೀ ಶ್ರೇಷ್ಠ ಮುಖ್ಯಪ್ರಾಣ**
**ಮುಷ್ಟಿ ಯುದ್ಧದಾ ಯಜ್ಞದಲ್ಲಿ ತೋರಿಸಿದೆ ನಿನ್ನ ತ್ರಾಣ**
**ಕೃಷ್ಣವೈರಿ ಆ ಜರಾಸಂಧನನು ಯಜ್ಞಪಶುವಗೊಳಿಸಿ**
**ಯಜ್ಞಭೋಕ್ತಾರ ವಿಷ್ಣುವನ್ನು ಪ್ರತ್ಯಕ್ಷ ತೃಪ್ತಿ ಪಡಿಸಿ**
**ರಾಜಸೂಯದಲಿ ಅಶ್ವಮೇಧದಲಿ ಇತ್ತ ಹವಿಯ ಭಾಗ**
**ಅದಕು ಹಿರಿದಾಯ್ತು ವಿಷ್ಣು ದ್ವೇಷಿಯನು ಕೊಂದ ಮಹಾಯಾಗ.** (ಪ.23)

ರಾಜಸೂಯಯಾಗ ಹಾಗೂ ಅಶ್ವಮೇಧಗಳಲ್ಲಿ ಅರ್ಪಿಸಿದ ಹವಿರ್ಭಾಗಕ್ಕಿಂತಲೂ ವಿಷ್ಣುದ್ವೇಷಿಯನ್ನು ಕೊಂದ ಮಹಾಯಾಗವು ಪ್ರತ್ಯಕ್ಷ ಭಗವಂತನಾದ ಶ್ರೀಕೃಷ್ಣನಿಗೆ ಹೆಚ್ಚು ತೃಪ್ತಿ ಪಡಿಸಿತೆಂದು ಕವಿಗಳು ಹೇಳುವುದು, ಮಾಧ್ವಸಿದ್ಧಾಂತ ತಿಳಿದವರಿಗೆ ತುಂಬಾ ಅರ್ಥಭರಿತವಾಗಿ ಕಾಣುತ್ತದೆ. ಜೀವನವೊಂದು ಯಜ್ಞವೆಂದು ಗ್ರಹಿಸಿದರೆ, 'ಯಜ್ಞಭೋಕ್ತಾರ ವಿಷ್ಣು' ಎಂದು ಒಪ್ಪಬೇಕಾಗುತ್ತದೆ. 'ವಿಷ್ಣು ರ್ವೈಯಜ್ಞಃ' ಯಜ್ಞಾಧಿಪತಿ ವಿಷ್ಣುವೇ. ಆದ್ದರಿಂದ ವಿಷ್ಣು ದ್ವೇಷ ಎನ್ನುವುದು, ಮೂವತ್ತುಮೂರು ಕೋಟಿ ದೇವತೆಗಳಲ್ಲಿ ಒಬ್ಬನಾದ ಸಾಮಾನ್ಯ ದೇವತೆಯ ದ್ವೇಷವಲ್ಲ. ಜೀವನವನ್ನು ಯಜ್ಞವನ್ನಾಗಿಸಲು ವಿರೋಧಿಸುವ ಕೇವಲ ಪಾಶವೀ ಬದುಕು ನಡಿಸ ಬಯಸುವ ಆಸುರೀಭಾವವಾಗುತ್ತದೆ. ಇದು ನಿಜವಾಗಿ ಜೀವನ ಸಂಸ್ಕೃತಿಯ ಅಂತಸ್ಸಾರದ ದ್ವೇಷ. ಭೀಮನು

ಜರಾಸಂಧಾದಿಗಳನ್ನು ಸಂಹರಿಸಿದ್ದಾಗಲಿ, ಕೌರವಸಂಹಾರ ಮಾಡಿದ್ದಾಗಲಿ, ಈ ದೃಷ್ಟಿಯಿಂದ ಮಹಾ ಯಾಗವೇ ಎನ್ನಿಸಿಕೊಳ್ಳುತ್ತದೆ. ಆದ್ದರಿಂದಲೇ ಮಧ್ವರು, ವಿಷ್ಣುದ್ವೇಷವನ್ನು 'ಭಕ್ತಿ' ಎಂದು ಸ್ವೀಕರಿಸಲಿಲ್ಲ. ಇದು ವಿಶ್ವದ ಭಕ್ತಿದರ್ಶನಕ್ಕೆ ಶ್ರೀಮಧ್ವಾಚಾರ್ಯರು ನೀಡಿದ ಮಹತ್ತರ ಕಾಣಿಕೆ. ಈ ಅರಿವು ಕನ್ನಡ ಸಾಹಿತ್ಯ ವಿಮರ್ಶಕರಲ್ಲಿ ದೃಢಗೊಂಡಿದ್ದರೆ, ರಾವಣ ದುರ್ಯೋಧನರ ವೈಭವೀಕರಣ ಪರಂಪರೆ ಕನ್ನಡದಲ್ಲಿ ಈಗಿನಂತೆ ನೆಲೆಗೊಳ್ಳುತ್ತಿರಲಿಲ್ಲ. ಈ ಪರಂಪರೆಯು, ತಿರುಳಿನಲ್ಲಿ ಜೀವನ ಸಂಸ್ಕಾರದ ದ್ವೇಷವಾಗಿದೆ ಎಂದೂ 'ವೈದಿಕ ದರ್ಶನದ', ಯಜ್ಞ ತತ್ತ್ವದ ವಿರೋಧವೆಂದೂ ಗಟ್ಟಿಯಾಗಿ ಪ್ರತಿಪಾದಿಸುವ ಹೊಣೆ, ಮಾಧ್ವ ಸಾಹಿತಿ-ವಿಮರ್ಶಕರ ಹೆಗಲಮೇಲಿದೆ.

## 6

ಶ್ರೀಮದಾನಂದತೀರ್ಥರು, ಉಪನಿಷತ್ತುಗಳಿಗೂ ಮೂಲವಾದ ವೇದ ದರ್ಶನವನ್ನೇ ಪ್ರಧಾನವಾಗಿ ಪ್ರತಿಪಾದಿಸಿದ್ದರಿಂದ, ಅವರು, ಅನೇಕ ಪಾರಂಪರಿಕ ಪದಗಳಿಗೆ, ಪರಿಕಲ್ಪನೆಗಳಿಗೆ ಹೊಸ ತಿರುವನ್ನೇ ಕೊಡುತ್ತಾರೆ. ಮಾನವೀಯ ಜೀವನಕ್ಕೆ ವಿಶೇಷ ಕೆಚ್ಚು ನೀಡುತ್ತಾರೆ.

ಉದಾಹರಣೆಗೆ, ಜೀವನದಲ್ಲಿ ಕಷ್ಟಸಹನೆ, ದುಷ್ಟರಿಂದ ಬರುವ ಪೀಡೆ, ಹಿಂಸೆಗಳ ಸಹನೆಗಳಿಗೆ ಅಸಹಾಯಕ ತಾಳ್ಮೆ ಎಂಬ ಅರ್ಥ ಎಂದೂ ಇರುವುದಿಲ್ಲ. ಒಬ್ಬ ವೀರ ಸೇನಾಧಿಪತಿಯು ಎಲ್ಲ ದಾಳಿಗಳನ್ನೂ ವಿಫಲಗೊಳಿಸುವಂತೆ, ವಿಷ್ಣು ಭಕ್ತರು, ಜೀವನದ ಎಲ್ಲ ಕ್ರೌರ್ಯ, ದೌಷ್ಟ್ಯ ಹಾಗೂ ಹಿಂಸೆಗಳನ್ನೆದುರಿಸಿ, ವಿಫಲಗೊಳಿಸುತ್ತಾರೆ. ಈ ದೃಷ್ಟಿಯಿಂದ ಕೆಳಗಿನ ಪದ್ಯವನ್ನು ಗಮನಿಸಬೇಕು.

**ಹನುಮ-ಭೀಮ-ಗುರುಮಧ್ವ ಮೂರು ಅವತಾರಗಳನು ನೋಡೆ**
**ವೈರಿ ಹಿಂಸೆಗಳ ನಿರ್ವಿಕಾರದಿಂ ತಡೆದುಕೊಂಡೆ ಪೀಡೆ**
**ಸಕಲಗುಣದಿ ಪರಿಪೂರ್ಣ ನೀನು ಸರ್ವಜ್ಞ ಸರ್ವಶಕ್ತ**
**ಸ್ವಚ್ಛನಿರುವೆ, ಸ್ವೇಚ್ಛೆಯಲಿ ಮೃತ್ಯು, ಪ್ರಗಲ್ಭ ನೀನು ಮುಕ್ತ.** (- ಪ. 32)

ಹನುಮ, ಭೀಮ, ಮಧ್ವ ಈ ಮೂವರೂ ತಮ್ಮ ಜೀವಿತ ಕಾಲದಲ್ಲಿ ಶತ್ರುಗಳಿಂದ ಅನುಭವಿಸಿದ ಹಿಂಸೆ ಅಪಾರ. ಆಂಜನೇಯನ ಬಾಲಕ್ಕೆ ರಾವಣನು ಬೆಂಕಿ ಇಡಿಸಿದ. ತನ್ನ ಭಯಂಕರ ಮುಷ್ಟಿಯಿಂದ ಆಘಾತಿಸಿದ. ಇಂದ್ರಜಿತು ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದ. ಆದರೆ ಆಂಜನೇಯನು ಆ ಎಲ್ಲ ಆಘಾತಗಳನ್ನು ನಿರ್ವಿಕಾರವಾಗಿ ಎದುರಿಸಿ ವಿಫಲಗೊಳಿಸಿದನಲ್ಲದೆ ಅಸಹಾಯನಾಗಿ ಸಹಿಸಿಕೊಳ್ಳಲಿಲ್ಲ. ಅದೇ ರೀತಿ, ಕೌರವನು ಭೀಮನಿಗೆ ಸರ್ಪದಂಶ ಮಾಡಿಸಿದ, ವಿಷ ತಿನ್ನಿಸಿದ, ಗದಾಘಾತ ಮಾಡಿದ. ಭೀಮಸೇನ ದೇವರು ಎಲ್ಲವನ್ನೂ ಅಟ್ಟಹಾಸದಿಂದಲೇ ಎದುರಿಸಿದರು. ಮಧ್ವರು ಕುಸ್ತಿಪಟುಗಳನ್ನೇ ಎದುರಿಸಿದರು. ಬೌದ್ಧಿಕವಾಗಿ, ತ್ರಿವಿಕ್ರಮ ಪಂಡಿತಾಚಾರ್ಯರಂಥ (ಮೂಲತಃ ಅದ್ವೈತಿಗಳಾದ) ವಿದ್ವಾಂಸರ ತರ್ಕದ ಎಲ್ಲ ದಾಳಿಯನ್ನೂ ಚಲವಿಚಲಿತರಾಗದೆ ಎದುರಿಸಿ ವಿಫಲಗೊಳಿಸಿದರು. ಮಧ್ವರಿಗೂ ಘಟಸರ್ಪ ಕಚ್ಚಿ ವಿಫಲವಾದ ಕತೆ ಇದೆ. ಆಚಾರ್ಯರ ಗ್ರಂಥ ಭಂಡಾರವನ್ನೇ ಕದಿಯಲಾಯಿತು. ಈ ಎಲ್ಲ ಸನ್ನಿವೇಶಗಳಲ್ಲಿಯೂ ಶ್ರೀಮಧ್ವಾಚಾರ್ಯರ ವೀರ ಪ್ರಶಾಂತಿಯ ಪ್ರತಿಕ್ರಿಯೆಯೇ ಕಂಡು ಬರುತ್ತಿದೆ. ಭಗವದ್ಗೀತೆಯ 'ತಿತಿಕ್ಷಾ' ಎಂಬ ಪದಕ್ಕೆ ಶೀತೋಷ್ಣಗಳ ದ್ವಂದ್ವವನ್ನು ಅನಿವಾರ್ಯವೆಂದು ಸಹಿಸುವುದೆಂದು ಅರ್ಥವಲ್ಲ, ಅವುಗಳ



ಪರಿಣಾಮಗಳನ್ನು ವಿಫಲಗೊಳಿಸುವುದೆಂದು ಮಧ್ವರ ಅಭಿಪ್ರಾಯವಿದೆ. ವೇದರ್ಷಿಗಳೂ ಜೀವನದ ಎಲ್ಲ ಸಂಕಷ್ಟಗಳನ್ನು, ಸಮಸ್ಯೆಗಳನ್ನು ಧೀರರಾಗಿ ಪ್ರತಿಭಟಿಸಿ ವಿಫಲಗೊಳಿಸಿದರು. ಅಂತೆಯೇ 'ಧೀರ'ತ್ವದ ಪರಿಕಲ್ಪನೆ ವೇದಗಳಲ್ಲಿ ಪ್ರಧಾನವಾಗಿದೆ. 'ಧೀರ' ಶಬ್ದದಲ್ಲಿಯೇ, ಜ್ಞಾನ ಹಾಗೂ ಸಂಕಲ್ಪ ಶಕ್ತಿಗಳ ಸಂಪೂರ್ಣ ಸಂಗಮವಿದೆ. ಶ್ರೀಕೃಷ್ಣನು ಬೋಧಿಸಿದ ಬುದ್ಧಿಯೋಗದಲ್ಲಿಯೂ ಭೀಷ್ಮರಂಥ ಪ್ರಚಂಡ ವಿರೋಧಿಗಳನ್ನೂ ವಿಫಲಗೊಳಿಸುವ ಧೀರ ಪ್ರಜ್ಞೆಯೇ ಉಂಟು.

ಈ ಹಿನ್ನೆಲೆಯಲ್ಲಿ, ಶ್ರೀ ರಾಘವೇಂದ್ರ ಸ್ವಾಮಿಗಳು ತಮ್ಮ ಗೀತಾ ವಿವೃತಿಯಲ್ಲಿ, ಗೀತೆಯ 'ಮಾತ್ರಾಸ್ಪರ್ಶಾಸ್ತು' ಎಂದು ಪ್ರಾರಂಭವಾಗುವ ಶ್ಲೋಕದ (II - 14) ಅರ್ಥ ವಿವರಿಸುತ್ತ 'ತಿತಿಕ್ಷಸ್ವ' ಪದಕ್ಕೆ 'ವಿಫಲೀಕುರು' ಎಂದು ತಿಳಿಸಿರುವುದನ್ನಿಲ್ಲಿ ಗಮನಿಸಬೇಕು. -

**ಅಭಿಮಾನ ತ್ಯಾಗೇನ ತನ್ಮಾತ್ರಾಸ್ಪರ್ಶಾನ್**
**ತಿತಿಕ್ಷಸ್ವ ವಿಫಲೀಕುರು......**

(ದೇಹದಲ್ಲಿ ನಾನು ನನ್ನದು ಎಂಬ ಅಭಿಮಾನ ತ್ಯಾಗದಿಂದ ಮಾತ್ರಾಸ್ಪರ್ಶಗಳನ್ನು (ಇಂದ್ರಿಯ ವಿಷಯ ಪದಾರ್ಥ ಸಂಪರ್ಕವನ್ನು ಸುಖದುಃಖ ದ್ವಂದ್ವ ಕಾರಣವಾಗದಂತೆ) ತಿತಿಕ್ಷಸ್ವ - ಎಂದರೆ ವಿಫಲಗೊಳಿಸು)

ಶ್ರೀ ಅರವಿಂದರೂ ಸಾವಿತ್ರಿ ಮಹಾಕಾವ್ಯದಲ್ಲಿ ಕೇವಲ ದುಃಖ ಸಹನೆ ಹಾಗೂ ಆ ದುಃಖವನ್ನು ವಿಫಲಗೊಳಿಸುವ ದಿವ್ಯಶಕ್ತಿಯ ವ್ಯತ್ಯಾಸವನ್ನು ವಿಶೇಷವಾಗಿ ಪ್ರತಿಪಾದಿಸಿದ್ದಾರೆ. (Savitri-Page 507 ನೋಡಿ)

ಕನ್ನಡದಲ್ಲಿ - ಬೇಂದ್ರೆಯವರು ಹೇಳುವಂತೆ - ತಾತ್ತ್ವಿಕ ವಿಮರ್ಶೆ ನೆಲೆಗೊಳ್ಳದೆ, ವಾಯುಸ್ತುತಿಯಂತಹ ಕಾವ್ಯದಲ್ಲಿ ಬಳಕೆಯಾದ ಪದಗಳ ಅರ್ಥಸಂಪದವು, ವೈಚಾರಿಕ ಧ್ವನಿಯು, ಹೊಳೆಯುವುದೇ ಇಲ್ಲ. ಇಂಥ ಕಾವ್ಯಗಳಲ್ಲಿ ಒಂದು ತಾತ್ತ್ವಿಕ ಪರಂಪರೆಯ ಧ್ವನಿ ಪರಂಪರೆಯೇ ಇರುತ್ತದೆ.

ಶ್ರೀ ಪೂರ್ಣಪ್ರಜ್ಞರೆಂದೂ, ಅನುಮಾನ ತೀರ್ಥರೆಂದೂ ಭಾವಿ ಬ್ರಹ್ಮರೆಂದೂ ಸ್ಮರಣೀಯರಾದ ಶ್ರೀ ಮಧ್ವಾಚಾರ್ಯರ ಜೀವನ ಚರಿತ್ರೆಯಲ್ಲಿ ಐತಿಹಾಸಿಕ ಅಂಶಗಳಿದ್ದರೂ ಆಚಾರ್ಯರ ಜೀವನ ದರ್ಶನದ ಸಾಂಕೇತಿಕ ರೂಪಗಳು ಈ ಚಾರಿತ್ರಿಕ ಘಟನೆಗಳೊಂದಿಗೆ ಅವಿಭಾಜ್ಯವಾಗಿ ನೇಯ್ಗೆಯಾಗಿರುತ್ತವೆ. ಈ ಹಿನ್ನೆಲೆಯೇ ಇಲ್ಲದ ಓದುಗರಿಗೆ ಇಂಥ ಪ್ರಾಜ್ಞರ ಜೀವನ ದರ್ಶಕ ಕೃತಿಗಳ ಪ್ರತಿ ಪದಾರ್ಥ ಮಾತ್ರವಲ್ಲ, ಪ್ರತಿ ಪದಗಳ ತಾತ್ತ್ವಿಕ ಧ್ವನ್ಯಾರ್ಥ ವಿವರಣೆಯನ್ನೂ ನೀಡಬೇಕಾಗುತ್ತದೆ. ಅದರಲ್ಲಿಯೂ ಶ್ರೀ ಮಧ್ವಾಚಾರ್ಯರು ವೇದ, ಉಪನಿಷತ್ತು, ಬ್ರಹ್ಮಸೂತ್ರಗಳಲ್ಲಿ ಏಕ ವಾಕ್ಯತೆಯನ್ನು ಗುರುತಿಸಿದ್ದಲ್ಲದೆ ಪಾಂಚರಾತ್ರಾದಿ ವೈಷ್ಣವ ಆಗಮಗಳು, ರಾಮಯಣ, ಭಾರತ ಕಾವ್ಯಗಳು, ಭಗವದ್ಗೀತೆ ಅಲ್ಲದೆ ಭಾಗವತಾದಿ ಪುರಾಣ ಸಾಹಿತ್ಯವನ್ನೂ ಅಖಂಡ ದರ್ಶನದ ಪ್ರಮಾಣ ಗ್ರಂಥಗಳನ್ನಾಗಿ ವ್ಯಾಖ್ಯಾನಿಸಿದರು. ಇದರಿಂದ ಹುಟ್ಟಿದ ವಿಶಿಷ್ಟ ಪರಿಭಾಷೆಯು ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು, ಶ್ರೀ ಜಯತೀರ್ಥರು, ಶ್ರೀ ವ್ಯಾಸರಾಯರು ಹಾಗೂ ಶ್ರೀ ವಾದಿರಾಜರು, ಶ್ರೀ ರಾಘವೇಂದ್ರ ಸ್ವಾಮಿಗಳು ರಚಿಸಿದ ಸಂಸ್ಕೃತ ಗ್ರಂಥಗಳಲ್ಲಿ ವಿಸ್ತಾರವಾಗಿ

ಬಳಕೆಯಾಗಿದೆ. ಅದೇ ಪರಿಭಾಷೆ, ಕನ್ನಡ ಹರಿದಾಸರ ಕೃತಿಗಳಲ್ಲಿ ಓತ ಪ್ರೋತವಾಗಿದೆ. ವಿಮರ್ಶಕರು ಈ ಪರಿಭಾಷಾ ವೈಶಿಷ್ಟ್ಯವನ್ನರಿಯದೆ ಕೇವಲ ಪೌರಾಣಿಕ ಕಥಾರೂಪ, ದೇವತಾಸ್ತುತಿಗಳು ಮಾತ್ರ ಇಲ್ಲಿ ಉಂಟೆಂದು ಭ್ರಮಿಸಿದರೆ ಅದಕ್ಕಿಂತ ನಷ್ಟ ಬೇರೊಂದಿಲ್ಲ.

ಇದೇ ಮಾತು. ಪ್ರೊ। ಜಿ.ವಿ. ಕುಲಕರ್ಣಿಯವರು (ಜೀವಿ) ಅನುವಾದಿಸಿದ 'ಶ್ರೀ ಮದ್ವಾಯುಸ್ತುತಿ'ಯ ಅಂತರಾರ್ಥ ಅರಿಯುವ ಪ್ರಯತ್ನಕ್ಕೂ ಅನ್ವಯವಾಗುತ್ತದೆ. ನಾವು ಕೇವಲ ನವರಸಗಳ ಹೆಸರು ಕೇಳಿದ್ದೇವೆ. ಆದರೆ ಶ್ರೀಮಧ್ವ ಜೀವನ ಚರಿತ್ರೆಯಲ್ಲಿ 'ಕೃತಾಂತರಸ'ದ ಅನುಭವವಿದೆ ಎಂದು ಸುಮಧ್ವವಿಜಯವು ಹೇಳುತ್ತದೆ. ನವರಸಗಳಿಗೇ ನಮ್ಮ ರಸವಿವೇಕವನ್ನು ನಿಲ್ಲಿಸಿದ ಕನ್ನಡ ಪ್ರಜ್ಞೆಗೆ ಈ 'ಕೃತಾಂತರಸ'ದ ಮರ್ಮ ಹೊಳೆಯಬಹುದೆ?

**ಕಾಲಃ ಸ ಏವ ಸಮವರ್ತತ ನಾಮ ಯಾವ-**
**ಚ್ಚಿಂತಾಕುಲಂ ವಿವಧ ಸಾಧುಕುಲಂ ಬಭೂವ**
**ವೇದಾಂತ ಸಂತತ ಕೃತಾಂತರಸಂ ನ ವಿದ್ಮಃ**
**ಶ್ರೇಯೋಲಭೇಮಹಿ ಕಥಂ ನು ವಯಂ ಬತೇತಿ।** (ಸರ್ಗ 2 -ಶ್ಲೋಕ - 5)

(ಶ್ರೀವಾಯುದೇವರು (ಮಧ್ವರಾಗಿ) ಅವತರಿಸುವ ಕಾಲ ಬರುತ್ತಿದ್ದಂತೆಯೇ ಅನೇಕ ಸಾಧು ಸಮುದಾಯವು -''ವೇದಾದಿಗಳಲ್ಲಿ ಸಂಪೂರ್ಣವಾಗಿ ವ್ಯಾಪ್ತವಾದ ಕೃತಾಂತರಸವು ನಮಗೆ ತಿಳಿಯದಾಗಿದೆ, ಆದ್ದರಿಂದ ನಾವು ಶ್ರೇಯಸ್ಸನ್ನು ಪಡೆಯುವುದೆಂತು?'' ಎಂದು ಚಿಂತಾಕುಲವಾಗಿತ್ತು)

''ಸುಮಧ್ವವಿಜಯವು'' ಅತ್ಯಂತ ಸುಂದರ ಕಾವ್ಯ. ಮಾಧ್ವ ದರ್ಶನಕ್ಕೆ ಸ್ವಚ್ಛ ಕನ್ನಡಿ ಹಿಡಿದ ಕೃತಿ. ಅದರಲ್ಲಿ ಬರುವ ಈ 'ಕೃತಾಂತರಸವು' 1) ವೇದಾದಿಗಳಲ್ಲಿ ಸಂಪೂರ್ಣ ವ್ಯಾಪ್ತವಾಗಿದೆ, (ವೇದಾಂತ ಸಂತತ) 2) ಇಂಥ ರಸದಿಂದ ಶ್ರೇಯೋಲಾಭ. (ಶ್ರೇಯೋಲಭೇಮಹಿ).

ನಿಜವಾಗಿ, ಮನಸ್ಸಿನಾಚೆಗಿನ ವಿಜ್ಞಾನಮಯ ಕೋಶದ ನೆಲೆಗೇರಿದ ಮೇಲೆ, ಜ್ಞಾನಾನಂದಗಳು ಸಮರಸಗೊಳ್ಳುತ್ತವೆ. ವಿಜ್ಞಾನಮಯ ಕೋಶ-ಸುಪರ್‌ಮೈಂಡ್-ಎಂದಾಗ ಜ್ಞಾನ ಪ್ರಾಚುರ್ಯವಿರುತ್ತದೆ. ಆನಂದಮಯ ಕೋಶ-ಎಂದಾಗ ಆನಂದ ಪ್ರಾಚುರ್ಯವಿರುತ್ತದೆ. ಪರಮಾತ್ಮನ ಜ್ಞಾನಾನಂದಗಳು ಅಭಿನ್ನ. ಅದೇ ರೀತಿ, 'ಮಧು' ಶಬ್ದಾರ್ಥವೇ ಜ್ಞಾನ ತತಿಯಿಂದ ಅಂದರೆ ಸ್ವರೂಪೇಂದ್ರಿಯವಾದ ಸಾಕ್ಷಿಯ ಅನುಭವಕ್ಕೆ ಬರುವ ಆನಂದವೆಂದು ಅರ್ಥ. 'ಮ' ಎಂದರೆ ಜ್ಞಾನ, 'ತ್' ಎಂದರೆ ತತಿ, ಎಂದರೆ ಜ್ಞಾನವಿಷಯತ್ವ ಎಂದರ್ಥ (ಮದ್‌ಜ್ಞಾನ ತತಿರುಚ್ಯತೇ) ಮದ ಎಂದರೆ ಸುಖ. ಇಂಥ ಸುಖ ಪೂರ್ಣತ್ವ ಉಳ್ಳದ್ದು ಮಧು. (ಈ ವಿಷಯದಲ್ಲಿ ಹೆಚ್ಚಿನ ವಿವರಣೆಗೆ ಅಖಿಲ ಭಾರತ ಮಾಧ್ವ ಮಹಾಮಂಡಲದ (ಬೆಂಗಳೂರು) ಉಪನಿಷತ್ ಪ್ರಸ್ಥಾನ - ಸಂಪುಟ - 3 (1990) ಪುಟ 139 -141 ನೋಡಿರಿ.)

ದ.ರಾ. ಬೇಂದ್ರೆಯವರು ಮಧು ವಿದ್ಯೆಯನ್ನು 'ರಸ' ತತ್ವದೊಡನೆ ಸಮೀಕರಿಸುತ್ತಾರೆ. ಶ್ರೀ ಮಧ್ವಾಚಾರ್ಯರು ಆದಿತ್ಯಾಂತರ್ಗತ ಮಧು ಸ್ವರೂಪದ ಸಾಕಾರರೂಪವಾಗಿದ್ದಾರೆ.



ಈ ಎಲ್ಲ ಅಂಶಗಳನ್ನು ಗಮನಿಸಿದಾಗ, ಶ್ರೀ ಮಧ್ವಾಚಾರ್ಯರ ಮೂಲಕ ಮುಖ್ಯ ಪ್ರಾಣ ತತ್ತ್ವದ, ಆನಂದ ಸ್ವರೂಪದ ಮೀಮಾಂಸೆ, ಅತ್ಯಂತ ಬೃಹತ್ ಪ್ರಮಾಣದಲ್ಲಿ ನಡೆಯಬೇಕಾದ ಅಗತ್ಯವಿದೆ ಎನ್ನಿಸುವುದು.

ಪ್ರೊ। ಜಿ.ವಿ. ಕುಲಕರ್ಣಿಯವರು ಅನುವಾದಿಸಿದ ಶ್ರೀಮದ್ವಾಯುಸ್ತುತಿಯು, ಪಾರಾಯಣ ಗ್ರಂಥವಾಗಿ ಉಳಿಯುವುದರೊಂದಿಗೆ 'ಕೃತಾಂತರಸ' ಜಿಜ್ಞಾಸೆಗೆ ಪ್ರೇರಣೆ ನೀಡಲೆಂದು ಶ್ರೀ ಹನುಮದ್ಭೀಮ ಮಧ್ವಾಂತರ್ಗತ, ಶ್ರೀ ರಾಮಕೃಷ್ಣ ವೇದವ್ಯಾಸಾತ್ಮಕ ಶ್ರೀ ಲಕ್ಷ್ಮಿ ಹಯಗ್ರೀವ ದೇವರಲ್ಲಿ ಪ್ರಾರ್ಥಿಸುತ್ತೇನೆ. ಶ್ರೀ ಶ್ರೀ ಪೇಜಾವರ ವಿಶ್ವೇಶತೀರ್ಥ ಶ್ರೀ ಪಾದಂಗಳವರ ಆಶೀರ್ವಾದಗಳೊಂದಿಗೆ ಕನ್ನಡದಲ್ಲಿ ಪ್ರಕಾಶಗೊಳ್ಳುವ ಈ ಕೃತಿಯು ಕನ್ನಡ ಪ್ರಜ್ಞೆಯಲ್ಲಿ ಸನ್ಮಂಗಳ ಜ್ಯೋತಿಯನ್ನು ಪ್ರಜ್ವಲಿಸುವುದೆಂಬ ಶ್ರದ್ಧೆ ನನಗಿದೆ.

'ಜೀವಿ'ಯವರು ತಪಸ್ಸಿನಂತೆ ಈ ಕೃತಿಯನ್ನು ಅನುವಾದಿಸಿದ್ದಾರೆ. ಅಲ್ಲಲ್ಲಿ ನುಸುಳಿದ ಅಲ್ಪಸ್ವಲ್ಪ ದೋಷಗಳನ್ನು ವಿಮರ್ಶೆಯ ಹೆಸರಿನಲ್ಲಿ ನಾನು ಎತ್ತಿ ತೋರಿಸಲು ಕೈ ಹಾಕುವುದಿಲ್ಲ. ಈ ಅಪೂರ್ವ ಕೃತಿಯ ಮುಖ್ಯ ಪ್ರೇರಕ ಆನಂದ ಜ್ಞಾನ ಶಕ್ತಿಯತ್ತ ದಿಗ್ದರ್ಶನ ಮಾಡುವುದು ನನ್ನ ಉದ್ದೇಶ. ಕನ್ನಡ ವಾಯುಸ್ತುತಿಯ, ಸರಳ ಸುಲಲಿತ ಪ್ರವಾಹವು ತಿಳಿ ಝುರಿಯಂತೆ ಹರಿದು ಬರುವುದರಿಂದ, ಈ ಅನುವಾದದ ಹಿಂದಿನ ತಪಸ್ಸು, ಕಲ್ಪನೆಗೆ ಬರುವುದಿಲ್ಲ. ಆದರೆ ಮೂಲ ವಾಯುಸ್ತುತಿಯನ್ನು ಓದಿದವರಿಗೆ ಅದರ ಕ್ಲಿಷ್ಟತೆ, ಸಮಾಸಗಳ ಗರ್ಜನೆ, ಅನ್ವಯದ ಕಷ್ಟ ದಿಕ್ಕು ತಪ್ಪಿಸುವಂತಿವೆ ಎಂದು ಅನುಭವವಾಗುವುದು. ಆದ್ದರಿಂದಲೇ ಜೀವಿಯವರು ಶ್ರೀ ಮದ್ವಾಯುಸ್ತುತಿಯ ಕನ್ನಡಾನುವಾದಕ್ಕೆ ಕೈ ಹಾಕಿ ಯಶಸ್ವಿಯಾದದ್ದು ಒಂದು ಪ್ರಜ್ಞಾ ಸಾಹಸವೆಂದೇ ನಾನು ಭಾವಿಸಿದ್ದೇನೆ. ಭಗವದನುಗ್ರಹವಿದ್ದಾಗ ಯಾವುದು ಅಸಾಧ್ಯ? ಶ್ರೀಮದಾನಂದತೀರ್ಥರೇ ಜೀವಿಯವರನ್ನು ಜೀವಿಯವರ ಧರ್ಮಪತ್ನಿಯನ್ನು ಈ ಮೂಲಕ ಅನುಗ್ರಹಿಸಿದ್ದಾರೆ. ಆ ಶ್ರೀಮದಾನಂದ ತೀರ್ಥರಿಗೆ ಸಾಷ್ಟಾಂಗ ಪ್ರಣಾಮ ಸಲ್ಲಿಸುತ್ತ, ಈ ಮುನ್ನುಡಿ ಬರೆಯಲು ಅವಕಾಶವಿತ್ತದ್ದಕ್ಕಾಗಿ 'ಕಲಾ-ಜೀವಿ' ದಂಪತಿಗಳಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

**ತಂದೆ - ತಾಯಿ ನೀ ಬಂಧು ಬಳಗ ನೀ ಆಪ್ತ ಇಷ್ಟ ಗುರುವೇ**
**ಹುಟ್ಟು ಸಾವುಗಳ ನೋವು ತಪ್ಪಿಸುವ ಮಾತರಿಶ್ವ ಪ್ರಭುವೇ**
**ಬಯಕೆ ಮೀರಿರುವ, ದಂಭರಹಿತವಿಹ ಗುಣವ ಹೊಂದಿದಂಥ**
**ಸದಾ ಕಾಲಕೂ ಅಧಿಕವಾಗುತಿಹ, ಕಡಿಮೆಯಾಗದಂಥ**
**ಕೃಷ್ಣನಲ್ಲಿ ನಿನ್ನಲ್ಲಿ ಅಚಲ ಶಾಶ್ವತದ ಭಕ್ತಿ ನೀಡು**
**ಸರ್ವವ್ಯಾಪ್ತನೇ ಪರಮ ಪೂಜ್ಯನೇ ಬೇಗ ವರವ ನೀಡು.** (ಪ.14)

**ಪ್ರೊ॥ ಆರ್. ಜಿ. ಕುಲಕರ್ಣಿ**
**( ಬೆಂಗಳೂರು )**

●

॥ ಶ್ರೀ ॥

# ಶ್ರೀ ಮದ್ವಾಯುಸ್ತುತಿಃ

## ಶ್ರೀಮನ್ನಖಸ್ತುತಿ

( ಶ್ರೀಮದಾನಂದತೀರ್ಥರು ರಚಿಸಿದ್ದು )

1)

॥ ಓಂ ॥ ಲಕುಮಿ ಸಹಿತ ಸರ್ವತ್ರವ್ಯಾಪ್ತ ನರಸಿಂಹದೇವ ಪ್ರಭುವೇ
ನಿನ್ನ ನಖದ ಮಹಿಮೆಯನು ಎಂತು ಬಣ್ಣಿಸಲಿ ನಾನು ವಿಭುವೇ
ಇಂದ್ರವೈರಿ ಮದಮತ್ತದೈತ್ಯ ಕರಿ-ಕುಂಭದಂತೆ ಇರುವ
ಉಚ್ಚ ಅದ್ರಿಗಳ ತುಂಡು ಮಾಡುವಾ ವಜ್ರದಂತೆ ಇರುವ
ನಿನ್ನ ಉಗುರು ಕಾಮಾದಿ ಶತ್ರು, ಅಜ್ಞಾನ ತೊಲಗಿಸುವುದು
ದೇವಗಣದ ಧ್ಯಾನಕ್ಕೆ ಯೋಗ್ಯ ಪ್ರಸನ್ನ ದೀಪ್ತಿ ಇಹುದು

ನಿನ್ನ ನಖಗಳನು ಸ್ತುತಿಸುತಿರುವೆ ನರಸಿಂಹದೇವ ನೋಡು
ಸುಜನ ರಕ್ಷಿಸುತ ನಮ್ಮ ವೈರಿಗಳ ಮೂಲ ನಾಶ ಮಾಡು.

2)

ದೇಶಕಾಲಗಳ ವೇದಶಾಸ್ತ್ರಗಳ ಬಗೆದು ಹುಡುಕಿ ನೋಡೆ
ನಿನಗೆ ಸಮನಾದ ವಸ್ತು ದೊರೆಯದು ಸ್ತುತಿಯ ಮಾಡಿ ಹಾಡೆ
ನಿನ್ನ ನಾಮದಾ ರುಚಿಯೆ ಬೇರೆ ಎಂಟನೆಯ ರಸವು ತಾನು
ಲಕುಮಿ-ಕಾಂತನೆ, ಪರಮಸತ್ಯನೇ, ಸ್ತುತಿಸುತಿಹೆನು ನಾನು
ರೋಷದಿಂದ ಬಲಗಣ್ಣ ಕಡೆಯ ಕಿಡಿ ಪ್ರಳಯ ಜ್ವಾಲೆ ಜನಿಸೆ
ಬ್ರಹ್ಮ-ರುದ್ರ-ಇಂದ್ರಾದಿ ದೇವಗಣ ದೀಪ ಹುಳದಿ ಜ್ವಲಿಸೆ

ನೀನೆ-ಸೃಷ್ಟಿ-ಸ್ಥಿತಿ-ಲಯದ ಕಾರಕ ನೀನೆ ಸರ್ವಶಕ್ತ
ನೀನೆ ಸರ್ವೇಶ, ನೀನೆ ಉತ್ತಮನು, ನಾನೊ ನಿನ್ನ ಭಕ್ತ.

**ಶ್ರೀಮನ್ನಖಸ್ತುತಿ ಸಮಾಪ್ತಿ**



## ಶ್ರೀ ಮದ್ವಾಯುಸ್ತುತಿ ಪ್ರಾರಂಭ

( ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯ ರಚಿಸಿದ್ದು )

1)

॥ ಓಂ ॥ ಶ್ರೀ ವಿಷ್ಣು ಪಾದದಲಿ ನಿಷ್ಠೆಯಿಟ್ಟ ಆನಂದತೀರ್ಥ ಗುರುವೆ
ಮೂಲೋಕದಲ್ಲಿ ಆಚಾರ್ಯ ಪದವಿ ಪಡೆದಂಥ ಖ್ಯಾತ ಪ್ರಭುವೆ
ತವ ಪಾದಪದ್ಮರಜ ನಮ್ಮ ಪಾವನಿಸಿ ಪೊರೆಯ ಬೇಕು ವಿಭುವೆ
ತ್ರೈಲೋಕ್ಯ ಪೂಜ್ಯ ಭಾರತಿಯು ರಮಣಿ ಶರದಿಂದು ನಗೆಯ ಬೀರಿ
ತವ ಪಾದ ಪದ್ಮದಲಿ ಪ್ರೀತಿ ಭಕ್ತಿ ತೋರಿದಳು ಬಳಿಗೆ ಸಾರಿ
ಆ ವಂದ್ಯ ಚರಣಗಳ ಹೊಳೆವ ಧೂಳಿ ಪಾವನಕೆ ಸುಲಭ ದಾರಿ.

2)

ಹರಿಸೇವೆಯಂತೆ ಗುರುಸೇವೆ ಗೈಯೆ ಪರಮೋತ್ಸಾಹದಿಂದ
ದೇವತೆಗಳೆಲ್ಲ ದಿಟ ಮುಕ್ತರಾದರಜ್ಞಾನ ತಮಸಿನಿಂದ
ಪ್ರಾಜ್ಞಾತ್ಮ ಜ್ಞಾನವನು ಪಡೆದರಧಿಕ ಗುರು ಪಾದಸೇವೆಯಿಂದ
ಅತಿಭಕ್ತಿಯಿಂದ ಉದ್ರೇಕಗೊಂಡು ಪಾದುಕೆಗೆ ತಲೆಯನಿಡಲು
ನವರತ್ನಖಚಿತ ಹೊನ್‌ಮುಕುಟ ಘಟ್ಟಿಸಲು ಕನಕ ರಜವು ಬರಲು
ಹೊಂಧೂಳಿ ಜೊತೆಗೆ ಗುರು ಚರಣಧೂಳಿ ನಮ್ಮನ್ನು ರಕ್ಷಿಸಿರಲು.

3)

ಹುಟ್ಟು-ಸಾವುಗಳ ಚಕ್ರ ಬಿಡಿಸಿ ನಿಜ ಆಧಿ-ವ್ಯಾಧಿ ಕಳೆವ
ಭಕ್ತ ಜನಕೆ ಸುಜ್ಞಾನ ನೀಡಿ ಆನಂದವನ್ನು ಕೊಡುವ
ನಿನ್ನ ಚರಣಗಳ ಧೂಳಿ ಮಹಿಮೆ ಬಣ್ಣಿಸಲು ನಾನು ಬಡವ
ಮನದಲ್ಲಿ ದೋಷ, ಹರಿಯಲ್ಲಿ ದ್ವೇಷ ಇರುವಂಥ ದೈತ್ಯ ಜನಕೆ
ಅಂಧತಮಸಿನಾಳಕ್ಕೆ ನೂಕುವಾ ಶಕ್ತಿಯಿಹುದು ಅವಕೆ
ಮೋಕ್ಷದಲ್ಲಿ ನಿಜ ಚಿದಾನಂದ ಕೊಡೆ ಬಲವು ಇಹುದು ಅವಕೆ.

4)

ಕಲಿ ಕಾಲದಲ್ಲಿ ಜಿಜ್ಞಾಸುಗಳಿಗೆ ಸನ್ಮಾರ್ಗ ತೋರುವವರು
ಚಂದ್ರೇಂದ್ರ-ರುದ್ರ-ರವಿ-ಶೇಷ-ಗರುಡರಿಂ ನಿತ್ಯ ವಂದ್ಯರಿವರು
ಮೊರೆಯ ಹೊಕ್ಕ ಭಕುತರನು ಕಾಯುವರು ಮಂತ್ರಸಿದ್ಧರಿವರು
ಮಧ್ವ ಹೆಸರಿನಲಿ ಖ್ಯಾತರಾದ ಅವತಾರ ಪುರುಷರಿವರು
ಬ್ರಹ್ಮ ಪದವಿಯನು ಮುಂದೆ ಪಡೆಯಲಿಹ ಮುಖ್ಯಪ್ರಾಣರಿವರು
ಮೂಲ ರೂಪ, ಅವತಾರ ರೂಪ, ಬಣ್ಣಿಸಲು ಶಕ್ತರಾರು?

5)

ಉದಯರವಿಯ ಹೊಂಬಣ್ಣ ಕಾಂತಿಯುತ ಬಾಹು-ಭೂಷ ಪಡೆದ
ವೀರ್ಯದಿಂದಲೇ ಎತ್ತುವಂಥ ಪ್ರಚಂಡ ಗದೆಯ ಹಿಡಿದ
ವಾಯುದೇವರವತಾರವಾದ ಬಲಭೀಮ ದೇವರಲ್ಲಿ
ತಮ್ಮ ಬೆಳಕಿನಿಂ ಲೋಕ ಬೆಳಗುತಿಹ ಮಧ್ವ ಗುರುಗಳಲ್ಲಿ
ಪರಮಹಂಸ ಯತಿವಂದ್ಯರಾದ ಭೂವಲಯ ರತ್ನರಲ್ಲಿ
ಬೇಡಿಕೊಳ್ಳುವೆನು ಸ್ತೋತ್ರ ಮಾಡುವಾ ಶಕ್ತಿ ನೀಡಲಿಲ್ಲಿ.

6)

ಸಾರರಹಿತ ಸಂಸಾರದಲ್ಲಿ ಕಡು ಕಷ್ಟ ಭಕ್ತ ಪಡೆಯೆ
ಅವನನುದ್ಧರಿಸೆ ಸ್ನೇಹಹಾಸದಿಂ ಕರುಣೆ ತೋರಿ ಪೊರೆವೆ
ಕಾಂತಿಯುಕ್ತ ಸದ್‌ವಿದ್ಯೆಯೆಂಬ ಮಣಿ ರತ್ನವನ್ನು ತರುವೆ
ಲಕುಮಿ-ವತ್ಸ-ಲಾಂಛನನ ನಿಜದ ಸಾನ್ನಿಧ್ಯ ಪಡೆದ ವಿಭುವೆ
ಜ್ಞಾನ-ಭಕ್ತಿ-ವೈರಾಗ್ಯ ನೀಡು ಆನಂದತೀರ್ಥ ಪ್ರಭುವೆ
ಕ್ಷೀರಸಾಗರನೆ, ಬೇಡಿಕೊಂಬೆ ಸಂಕಷ್ಟ ಹರಿಸು ಗುರುವೆ.

7)

ತನ್ನ ಸೇವಿಸುವ ಭಕ್ತ ಜನರ ಭವ ಬಂಧ ಹರಿಪ ಹನುಮ
ಜ್ಞಾನ ಕೊಡುವ ಭಾರತಿಯ-ರಮಣ, ಬರಲಿರುವ ಕಲ್ಪ-ಬ್ರಹ್ಮ
ಜೋಡು ಕೈಗಳಿಂ ತಲೆಯಬಾಗಿ ಇದೊ ವಂದಿಸುವೆನು ನಾನು
ತಾಪತ್ರಯಗಳ ತವರಿನಂತಿರುವ ನನ್ನ ಸಲಹೊ ನೀನು
ಲಕುಮಿ ಪತಿಯಾದ ಹರಿಯ ಚರಣದಲಿ ಮತ್ತೆ ನಿನ್ನ ಪದದಿ
ಸುಖದ ದಾತೃವೇ ಅಚಲವಾದ ಭಕ್ತಿಯನು ನೀಡು ಮುದದಿ.

8)

ಭೂಮಿ ಪಾಲಕರ ಭೂರಿ ಐಶ್ವರ್ಯ ಮೆರೆವ ಭುವನಲೋಕ
ಮೋಡ-ಸೂರ್ಯ-ಚಂದ್ರಾದಿ-ಮಣಿಗಳಿಂ ಹೊಳೆವ ಭುವರ್‌ಲೋಕ
ದೇವಭವನ ಆ ಸ್ವರ್ಗಲೋಕ ತವ ಭ್ರೂವಿಲಾಸದಿಂದ
ಸೃಷ್ಟಿ-ಸ್ಥಿತಿ-ಲಯ ಪಡೆಯುತಿಹವು ದಿಟ ಮುಖ್ಯಪ್ರಾಣನಿಂದ
'ಜಗವು ಸತ್ಯ' 'ಜೀವೇಶಭೇದಗಳು' ಭ್ರಾಂತಿ ಎಂಬರನ್ನು
ಮೋಹಗೊಳಿಸು ಸತ್‌ಯಜ್ಞದಲ್ಲಿ ಬಹ ಠಕ್ಕ-ಬೆಕ್ಕುಗಳನು.

9)

ಸುಜನರಿಂದ ಸುರರಿಂದ ಪೂಜ್ಯ ಮೂರನೆಯ ರೂಪವನ್ನು
ಭಜಿಸುವವರು ವೈಕುಂಠದಲ್ಲಿ ಪೆಡೆಯುವರು ಮಾನವನ್ನು
ಸದಾಕಾಲ ಸೇವಕರು ದಿವ್ಯ ಚಾಮರವ ಬೀಸುತಿಹರು
ಮನವ ಮೋಹಿಸುವ ಚಾರು ವೇಷ ಭೂಷಣವ ತೊಡಿಸಲಿಹರು
ಕಂಠಗಳಿಗೆ ನಳಿತೋಳಮಾಲೆ ಲಾವಣ್ಯ ಲಲನೆ ತಹರು
ಪೂರ್ಣಕುಂಭ ಕುಚ ಸ್ಪರ್ಶದಿಂದ ಕಾಂತೆಯರು ಮೋಹಿಸುವರು.

10)

ಚಂದ್ರ-ಸೂರ್ಯ-ಅಹಿರಾಜ-ಮದನ-ದೇವೇಂದ್ರರಿಂದ ಪೂಜ್ಯ
ದೇವದೇವನೇ ಮುಖ್ಯಪ್ರಾಣ ತವ ವಿಷ್ಣು ಸದನ ದಿವ್ಯ
ತಾಳಗತ್ತಿನಽ ಮೆಲ್ಲ ಹೆಜ್ಜೆಯಽ ಕುಣಿತವಿರುವುದಲ್ಲಿ
ದಿವ್ಯ ಚೆಲುವೆಯರ ಭವ್ಯ ಸಂಗೀತ ಇಂಪುಗಾನವಲ್ಲಿ
ಕುಂದ-ಮಂದಾರ ಗಂಧ ಮಹಪೂರ ಹರಿಸುತಿರಲು ಪವನ
ಮುಕ್ತಜೀವರಿಗೆ ಸದಾ ಸುಖವ ನೀಡುತ್ತಲಿರುವ ತಾಣ.



11)

ಶ್ರೇಷ್ಠ ಜ್ಞಾನಿಯೇ ಮುಖ್ಯಪ್ರಾಣನೇ ನಿನ್ನ ದ್ವೇಷಿ ಹಗೆಯು
ಅಂಧ ತಮಸಿನಲಿ ಘೋರ ನರಕದಲಿ ಬೀಳ್ವ ಅದುವೆ ದಿಟವು
ಕಲ್ಲು ಕಲ್ಲಿಗೆಽ ಡಿಕ್ಕಿ ಹೊಡೆಯೆ ಖಟ್‌ಖಟಲ್ ಮಿಂಚು ಬರಲು
ಬೆಂಕಿ ಕಿಡಿಯು ಧಗಧಗಿಸಿ ಉರಿಯುತಽ ಸುತ್ತ ಕುದಿಯುತಿರಲು
ನಿನ್ನ ಕಿಂಕರರು ಬಿಟ್ಟು ಬಿಡದೆ ಎಸೆಯುವರು ಕಲ್ಲಿನಿಂದ
ಗಾಸಿಗೊಳ್ಳುವರು ನಿನ್ನ ವೈರಿಗಳು ಚಿತ್ರಹಿಂಸೆಯಿಂದ.

12)

ಹರಿಯ ಚರಣ ಚಿರಧ್ಯಾನದಲ್ಲಿ ಅಸ್ಮದ್ ಗುರುಗಳಿರಲು
ಅವರ ಪಾರ್ಶ್ವ ಭೂಮಿಯಲಿ ಇರಲು ಸಗ್ಗಿಗರು ಬಯಸುತಿರಲು
ಅಮೃತ ಸದೃಶ ತತ್ತ್ವೋಪದೇಶಗಳಿಗುದಾಸೀನ ಇರುವ
ವ್ಯಕ್ತಿ ಮಧ್ಯಮನು, ನಿತ್ಯ ಸಂಸಾರಿ, ಸದಾ ದುಃಖಪಡೆವ
ದ್ವೇಷಿಗಳಿಗೆ ಇಹ ಅಂಧತಮಸಿನಾ ನರಕ ಇವಗೆ ಇಲ್ಲ
ಆದರೂನು ಆನಂದದಿಂದ ಇವ ಬಹಳ ದೂರ ಇರುವ.

13)

ಹಸಿದು ಸೊರಗಿ, ರಾಕ್ಷಸರ ದಂತ-ನಖದಿಂದ ಹಿಂಸೆ ಪಡೆದು
ಕ್ರೂರ ಪಕ್ಷಿಗಳ ಚುಂಚಿನಿಂದ ಮೈತುಂಬ ಗಾಯ ಪಡೆದು
ಅದೇ ಸಮಯದಲಿ ಒಗೆಯಲಾದ ಶಸ್ತ್ರಾಸ್ತ್ರ ಕ್ಷತಿಯ ಪಡೆದು
ಕೀವು-ರಕ್ತ-ಮಲ-ಮೂತ್ರ-ಹುಳಗಳ ಬಾವಿಯಲ್ಲಿ ಬಿದ್ದು
ಮುಳುಗಿ ಹೋಗುವರು ನಿನ್ನ ವೈರಿಗಳು ಮಿಥ್ಯಾವಾದಿ ಜನರು
ರಕ್ತ ಹೀರುವ ಜಿಗಳೆಯಿಂದ ಬಹು ಗಾಸಿಗೊಳುವರವರು.

14)

ತಂದೆ-ತಾಯಿ ನೀ ಬಂಧು-ಬಳಗ ನೀ ಆಪ್ತ-ಇಷ್ಟ ಗುರುವೇ
ಹುಟ್ಟು-ಸಾವುಗಳ ನೋವು ತಪ್ಪಿಸುವ ಮಾತರಿಶ್ವ ಪ್ರಭುವೇ
ಬಯಕೆ ಮೀರಿರುವ, ದಂಭರಹಿತವಿಹ, ಗುಣವ ಹೊಂದಿದಂಥ
ಸದಾ ಕಾಲಕೂ ಅಧಿಕವಾಗುತಿಹ, ಕಡಿಮೆಯಾಗದಂಥ
ಕೃಷ್ಣನಲ್ಲಿ, ನಿನ್ನಲ್ಲಿ ಅಚಲ ಶಾಶ್ವತದ ಭಕ್ತಿ ನೀಡು
ಸರ್ವವ್ಯಾಪ್ತನೇ ಪರಮಪೂಜ್ಯನೇ ಬೇಗ ವರವ ನೀಡು.

15)

ಅಖಿಲ ಗುಣಪೂರ್ಣ ಸರ್ವಶ್ರೇಷ್ಠ ಶ್ರೀ ವಿಷ್ಣು ದೇವನಲ್ಲಿ
ಸಿರಿಯ ಜೊತೆಗೆ ಭೂದೇವಿ ಕೈ ಹಿಡಿದ ಪರಮ ಪುರುಷನಲ್ಲಿ
ಅಧಿಕ ಭಕ್ತಿಯನು ತೋರಿ ಮಗ್ನ ನೀ ಅವನ ಸೇವೆಯಲ್ಲಿ
ಬ್ರಹ್ಮ-ವಾಯು-ಶಿವ-ಗರುಡ-ರುದ್ರ-ಇಂದ್ರಾದಿ ದೇವರಲ್ಲಿ
ತಾರತಮ್ಯದಲಿ ಭಕ್ತಿ ತೋರುವ ಭಕ್ತ ಗಣಕೆ ನಿತ್ಯ
ಮುಖ್ಯಪ್ರಾಣ ಗುರು ಕರುಣೆಯಿಂದ ರಕ್ಷಿಸುವ ಮಾತು ಸತ್ಯ.

16)

ಮೂಲ ಗುರುವೆ ಹೇ ಮುಖ್ಯಪ್ರಾಣನೇ ಹರಿಯ ಆಜ್ಞೆಯಿಂದ
ಜ್ಞಾತತತ್ತ್ವರಿಗೆ ಮುಕ್ತ ಜನಕೆ ಸುಖ ಕೊಡುವೆ ಒಲುಮೆಯಿಂದ
ನಿತ್ಯ ಬದ್ಧರನು ಸ್ವರ್ಗ-ನರಕ-ಭೂಲೋಕದಲ್ಲಿ ಇಡುವೆ
ಮಿಥ್ಯೆಯಿಂದ ಕೂಡಿರುವ ತಾಮಸರರು ದುಃಖಬಡಲು ಬಿಡುವೆ
ಅಂಧತಾಮಿಸ್ರ ಹಲವು ಬಗೆಯ ನರಕದಲಿ ಇಡುವೆ ನೀನು
ನೂರು ಶ್ರುತಿಗಳು ಮತ್ತೆ ಜೊತೆಗೆ ಇತಿಹಾಸ ಸಾಕ್ಷಿ ತಾನು.

17)

ವಾಯು ದೇವನೇ ನಿನ್ನ ಪ್ರಥಮ ಅವತಾರವನ್ನು ನಮಿಪೆ
ಸರ್ವಪೂಜ್ಯ ಆಜಾನುಬಾಹು ಹನುಮಂತ ರೂಪ ಭಜಿಪೆ
ಭಕ್ತರಾದಂಥ ದೇಹಧಾರಿಗಳ ಅಹಿತ ಸುಟ್ಟು ಬಿಡುವೆ
ಅವರ ಪಾಪ ಅಜ್ಞಾನಗಳನು ನಿತ್ಯ ಕಳೆದು ಬಿಡುವೆ
ರಾಮನಲ್ಲಿ ಆದರ್ಶ ಭಕ್ತಿಯನು ಸದಾ ತೋರುತಿರುವೆ
ಬ್ರಹ್ಮಚಾರಿಯೇ, ಚಿರಂಜೀವಿಯೇ ನಾನು ನಿನ್ನ ನೆನೆವೆ.

18)

ಮುಖ್ಯಪ್ರಾಣನೇ ನಿನ್ನ ಮಹಿಮೆಗಳನೆಂತು ಬಣ್ಣಿಸುವೆನು?
ಪೂರ್ವದಲ್ಲಿ ನೀ ಲಂಕೆಯಿಂದ ಸಾವಿರದ ಮೈಲುಗಳನು
ಒಂದೆ ನೆಗೆತದಲಿ ಹಾರಿ ಹೋಗಿ ಸಂಜೀವಿನಿಯಽ ತರಲು
ಗಂಧಮಾನ ಬೆಟ್ಟವನೆ ಕಿತ್ತಿ ಹೆಗಲಲ್ಲಿ ಹೊತ್ತು ಬರಲು
ಗಗನಮಾರ್ಗದಲಿ ಹೋಗಿ ಬಂದುದನು ಕ್ಷಣದಿ ಜನರು ನೋಡೆ
ರಾಮಪಾದದಲಿ ಇಟ್ಟು ನಮಿಸಿದೆಽ ಲೋಕವೆಲ್ಲ ಹಾಡೆ.

19)

ಅತುಲ ಮತಿಯ ಹೇ ಮುಖ್ಯಪ್ರಾಣನೇ ಶಕ್ತಿವಂತ ನೀನು
ದಿವ್ಯ ಔಷಧಿಯ ಬಳಸಿ ಮೂರ್ಛಿತರ ಸಲುಹುತಿದ್ದರೂನು
ನಿನ್ನ ಮನವು ಶ್ರೀ ರಾಮನಾಮ ಗುಣಗಾನ ಮಗ್ನ ತಾನು
ನೂರು ಯೋಜನ ಅಗಲವಾದ ಪರ್ವತವ ತೂರಿ ಒಗೆಯೆ
ಕಲ್ಲು-ತುಂಡುಗಳು ಮೊದಲಿನಂತೆ ನಿಜಸ್ಥಾನವನ್ನು ಪಡೆಯೆ
ನಿನ್ನ ಕೌಶಲವ ಎಂತು ಬಣ್ಣಿಸಲಿ ಭವ್ಯ ದಿವ್ಯ ಕಪಿಯೆ.

20)

ಚಿನ್ನ ಕವಚ ತೊಟ್ಟಿದ್ದ ನೀಚ ರಾವಣನ ಬೆಟ್ಟದೆದೆಯು
ನಿನ್ನ ಮುಷ್ಟಿಯಽ ಹೊಡೆತದಿಂದ ನುಗ್ಗಾಗಿ ತಗ್ಗು ಆಯ್ತು
'ಮೇರು ಪರ್ವತದಿ ಕೆರೆಯು ಆಯಿತೇ', ಜನರ ಶಂಕೆ ಬಲಿಯೆ
ನಿನ್ನ ಕೈಯಲಿಹ ಹೊನ್ನ ಕಡಗದ ಮಿಂಚು ಸುತ್ತ ಹೊಳೆಯೆ
ರಾಮಚಂದ್ರನಿಗೆ ಪ್ರಿಯವು ಆಗಿರುವ ಕೆಲಸದಲ್ಲಿ ಬದ್ಧ
ನಿನ್ನ ಮುಷ್ಟಿ ನಮ್ಮಿಷ್ಟ ಪೂರೈಸೆ ಇಲ್ಲವೇನು ಸಿದ್ಧ?



21)

ರಾಮದೂತನಾಗುತಲಿ ಸೀತೆಯೆಡೆ ಅವನ ಸುದ್ದಿ ಒಯ್ದೆ
ಅವಳ ಬಿನ್ನಹವ ರಾಮಚಂದ್ರನಿಗೆ ಮರಳಿ ಮತ್ತೆ ತಂದೆ
ವರದಿ ಕೊಬ್ಬಿದಾ ಅಕ್ಷ ಮೊದಲಾದ ದೈತ್ಯರನ್ನು ಕೊಂದೆ.
ರಾಮಚಂದ್ರ  ಸಂಪ್ರೀತನಾಗಿ ಅದೊ ಕೃಪಾದೃಷ್ಟಿಯಿಂದ
ತಲೆಯ ಮೇಲೆ ಅನುಗ್ರಹದ ಹಸ್ತ ತಾನಿಟ್ಟ ಪ್ರೀತಿಯಿಂದ
ಬ್ರಹ್ಮ ಪದವಿ, ಸಹಭೋಗ ಸುಖಗಳನು ಇತ್ತ ಒಲುಮೆಯಿಂದ.

22)

ಪ್ರಾಣದೇವ ತವ ಭೀಮಸೇನ ಅವತಾರ ಬಣ್ಣಿಸುವೆನು
ಏಕಚಕ್ರ ನಗರಿಯಲಿ ಶೋಕ ಪಡುವಂಥ ವಿಪ್ರನನ್ನು
ಪಾರುಮಾಡಲಿಕೆ ಬಕಾಸುರನ ಸಂಹಾರಕಾರ್ಯ ಗೈದೆ
ನಗರದಲ್ಲಿ ವಾಸಿಸುವ ಜನರ ಅಸುಗಳಿಗೆ ರಕ್ಷೆ ತಂದೆ
ಬಕನ ಅನುಜ ಕಿರ್ಮೀರನನ್ನು ಸಂಹಾರ ಮಾಡಿದವನೆ
ಪ್ರಾಣದೇವ ಕುರುಕುಲದ ಪತಿಯೆ, ನಿತ ನಿನಗೆ ನಮ್ಮ ನಮನ.

23)

ಮುಪ್ಪುಗೆದ್ದ ದೇವತೆಗಳಲ್ಲಿ ನೀ ಶ್ರೇಷ್ಠ ಮುಖ್ಯ ಪ್ರಾಣ
ಮುಷ್ಟಿಯುದ್ಧದಾ ಯಜ್ಞದಲ್ಲಿ ತೋರಿಸಿದೆ ನಿನ್ನ ತ್ರಾಣ
ಕೃಷ್ಣ ವೈರಿ ಆ ಜರಾಸಂಧನನು ಯಜ್ಞ ಪಶುವಗೊಳಿಸಿ
ಯಜ್ಞ ಭೋಕ್ತಾರ ವಿಷ್ಣುವನ್ನು ಪ್ರತ್ಯಕ್ಷ ತೃಪ್ತಿ ಪಡಿಸಿ
ರಾಜಸೂಯದಲಿ ಅಶ್ವಮೇಧದಲಿ ಇತ್ತ ಹವಿಯ ಭಾಗ
ಅದಕು ಹಿರಿದಾಯ್ತು ವಿಷ್ಣು ದ್ವೇಷಿಯನು ಕೊಂದ ಮಹಾಯಾಗ.

24)

ನಿನ್ನ ಹಗೆಗಳನು ಬಾಹು ಗದೆಯಿಂದ ಹೊಡೆದು ಹಾಕಿದವನೆ
ಪ್ರಾಣದೇವ ಆನಂದತೀರ್ಥ ಅವತಾರ ಧರಿಸಿದವನೆ
ಕೃಷ್ಣ ಸೇವೆಯಲಿ ಸಿಂಹನಾದ ಗೈಯುತ್ತ ಯುದ್ಧಗೈದೆ
ಲಕ್ಷ ಸೈನಿಕರ ನಾಶಗೊಳಿಸಿ ರಣದಲ್ಲಿ ಗೆಲವು ಪಡೆದೆ
ನಿನ್ನ ರಣದ ಶೌರ್ಯವನು ಬಣ್ಣಿಸಲು ಇಬ್ಬರಿಂದ ಸಾಧ್ಯ
ಒಬ್ಬ ಕೃಷ್ಣ, ಇನ್ನೊಬ್ಬ ಭೀಮ, ವಂದನೆಗೆ ನೀವೇ ಯೋಗ್ಯ.

25)

ವಿದ್ಯೆಯೆಂಬ ಸಾಗರದ ಒಡೆಯ ಸದ್‌ವಿದ್ಯೆ ನೀಡುವವನೆ
ಭೀಮನಾಗಿದ್ದೆ ಪೂರ್ವದಲ್ಲಿ ಹೇ ವಾಯು ದೇವ ನೀನೆ
ನಿನ್ನ ಮಡದಿ ದ್ರೌಪದಿಯೆ ಭಾರತಿಯು ವಿದ್ಯೆ ಕೊಡುವ ತಾಯಿ
ನಮ್ಮ ಒಳಗೆ ತಾ ವಾಸ ಮಾಡಿ ಅಜ್ಞಾನ ತೆಗೆವ ದೇವಿ
ನಿನ್ನ ಆಜ್ಞೆಯಲಿ ಕಾವ್ಯ ರಚಿಸುವ ಶಕ್ತಿ ನೀಡಲೆಂದು
ಅಶುಭದಿಂದ ರಕ್ಷಿಸಲಿ ಎಂದು ಬೇಡುವೆನು ನಾನು ಇಂದು.

26)

ವಸುದೇವನಲ್ಲಿ ಉದಿಸುತ್ತ ಕೃಷ್ಣ ಕ್ಷತ್ರಿಯನು ಆಗಿ ಬಂದ
ಮುನಿ ಪರಾಶರನ ಸಂತಾನ ವ್ಯಾಸಗುರು ವಿಪ್ರನಾಗಿ ನಿಂದ
ನಿಜ ವ್ಯಾಸ-ಕೃಷ್ಣರಲಿ ಭೇದವಿಲ್ಲ ದ್ವಿವಚನ ಏಕ ನಾಮ
ಇವರಿಬ್ಬರನ್ನು ಸೇವಿಸಲು ಬಂದ ಕುರುವಂಶ ಸೋಮ ಭೀಮ
ಬಿಳಿ ಕಮಲದಂತೆ ಶೋಭಿಸುವ ಕಣ್ಣು ಪಡೆದಿರುವ ನಿನಗೆ ನಮನ
ನಿತ ಭಕ್ತ ಜನರ ಸರಿ ಯೋಗಕ್ಷೇಮ ಗೈಯುವವು ನಿಮ್ಮ ಚರಣ

27)

ಕಾಂತೆ ದ್ರೌಪದಿಯು ಹಿಂದೆ ಬಯಸೆ ಸೌಗಂಧ ಕುಸುಮ ಜಾಲ
ತರಲು ಹೊರಟಾಗ ಮಾರ್ಗದಲ್ಲಿ ತಡೆದಿತ್ತು ಹನುಮ ಬಾಲ
ಎತ್ತಲಾಗದೇ ವೃದ್ಧ ಹನುಮರಾ ದಿವ್ಯ ರೂಪವನ್ನು
ಕಂಡು ಬೆದರಿ ನಮಿಸಿದನು ಭೀಮ, ತೋರಿದನು ಕ್ರೀಡೆಯನ್ನು
ಪೂರ್ಣಜ್ಞಾನದಿಂ ಕೂಡಿದಂಥ ಆನಂದತೀರ್ಥ ಇಂತು
ನಿನ್ನ ಎರಡು ಅವತಾರ ಲೀಲೆ ಅಜ್ಞರಿಗೆ ಮೋಹ ತಂತು.

28)

ಮುಖ್ಯಪ್ರಾಣನೇ ಕೋಟಿ ಕೋಟಿ ರಾಕ್ಷಸರ ಬಗ್ಗು ಬಡಿದೆ
ಕೋಪದಿಂದ ಹಟ ತೋರಿ ಸೆಣಸೆ ಗದೆಯಿಂದ ಅವರ ಕೊಂದೆ
'ಬ್ರಹ್ಮ ಸತ್ಯ ಜಗವೆಲ್ಲ ಮಿಥ್ಯೆ' ವೆಂಬವರ ಸೊಲ್ಲು ಅಡಗೆ
ಸುಳ್ಳುವಾದಗಳ ದೈತ್ಯಶಕ್ತಿಗಳ ವಾದದಿಂದ ಗೆದ್ದೆ
ಭೀಮನಾಗಿ ಪ್ರಿಯ ಭಾರ್ಯೆಗಂದು ಸೌಗಂಧ ಕುಸುಮ ತಂದೆ
ಆ ಭೀಮರೂಪಿ ಮಾರುತಿಯೆ ನಿನಗೆ ನಾ ಇದೋ ನಮಿಸ ಬಂದೆ.

29)

ಮುಖ್ಯ ಪ್ರಾಣನೇ ಭೀಮ ಗದೆಯಿಂದ ದೈತ್ಯನಾಶ ಗೈಯೆ
ವಕ್ರಬುದ್ಧಿ ಮಣಿಮಂತನೆಂಬ ದೈತ್ಯಾಧಿಪತಿಯು ಸಾಯೆ
ಕ್ರೋಧದಿಂದ ಅವ ಸೇಡು ತೀರಿಸಲು ಮರಳಿ ಹುಟ್ಟಿ ಬಂದ
ಚಕ್ರಪಾಣಿಯಲಿ ನಿರ್ಗುಣತ್ವವನು ಸಾರಿ ಎದುರು ನಿಂದ
ಶ್ರುತಿಗೆ ಸಮ್ಮತವು ಇಲ್ಲದಂತಹs ಶಾಸ್ತ್ರ ರಚಿಸಿ ತಂದ
ಸುಜನ ಮನವ ಕರಗಸದ ತೆರದಿ ಕೊರೆಯುತ್ತ ಬೆಳೆದು ನಿಂದ.

30)

'ನಾನೆ ನಿರ್ಗುಣನು, ನಾನೆ ಪರಬ್ರಹ್ಮ, ಜಗವು ಮಿಥ್ಯೆ' ಎಂದ
ವೇದ ಬಾಹಿರವು ಆದ ವಾದವನು ಅವನು ಮುಂದೆ ತಂದ
ತಮೋಯೋಗ್ಯ ಜನ ಅವನ ಮಾತು ಸರಿಯೆಂದು ಒಪ್ಪುತಿರಲು
ಮೋಕ್ಷಯೋಗ್ಯ ಸಜ್ಜನರು ಅದನು ತಪ್ಪೆಂದು ಬಿಟ್ಟು ಬಿಡಲು
ತಪ್ಪು 'ವಾದ' ವಿಷವೃಕ್ಷವನ್ನು ಬುಡ ಸಹಿತ ಸುಡಲು ಬಂದ
ಮುಖ್ಯಪ್ರಾಣನೇ ಮಧ್ವರೂಪ ಅವತಾರ ಧರಿಸಿ ನಿಂದ.



31)

ಮಧ್ವಗುರುವು ವ್ಯಾಖ್ಯಾನ ರೂಪಿ ನಿಜ ಸಿಂಹನಾದ ಗೈಯೆ
ಮಾಯೆಯೆಂದು ವಾದಿಸುವ ನರಿಗಳೋ ನಷ್ಟ ವೀರ್ಯರಾಗೆ
ದರ್ಪ ಕಳೆದು ಭಯಭೀತಗೊಂಡು ನೈರಾಶ್ಯದಿಂದ ಬಾಗಿ
ದೇಶ ಬಿಡುವ ಸರಿ ಸಮಯ ಬಂತೆಂದು ದಿಕ್ಕು ಪಾಲು ಆಗಿ
ಹತ್ತು ದಿಕ್ಕಿಗೆs ಓಡಿ ಹೋದರದೊ ವ್ಯರ್ಥ ಶಪಥ ಮಾಡಿ
ಬೈಯೆ ಉತ್ತಮರ ಮುಖವು ಕಪ್ಪಿಡಲು ದ್ರೋಹದಿಂದ ಕೂಡಿ.

32)

ಹನುಮ-ಭೀಮ-ಗುರುಮಧ್ವ ಮೂರು ಅವತಾರಗಳನು ನೋಡೆ
ವೈರಿ ಹಿಂಸೆಗಳ ನಿರ್ವಿಕಾರದಿಂ ತಡೆದುಕೊಂಡೆ ಪೀಡೆ
ಸಕಲ ಗುಣದಿ ಪರಿಪೂರ್ಣ ನೀನು ಸರ್ವಜ್ಞ ಸರ್ವಶಕ್ತ
ಸ್ವಚ್ಛನಿರುವೆ ಸ್ವೇಚ್ಛೆಯಲಿ ಮೃತ್ಯು, ಪ್ರಗಲ್ಭ ನೀನು ಮುಕ್ತ
ವಿಷ್ಣು ರಕ್ಷೆ ಪಡೆದಿರುವೆ ಶಂಕರಾದಿಗಳ ಒಡೆಯ ನೀನು
ಸುಜನ ಗಣಕೆ ಸುಖ ನೀಡುತಿರುವೆ ಅದರಲ್ಲಿ ಚೋದ್ಯವೇನು?

33)

ನಿನ್ನ ಮುಗುಳು ನಗೆ ಕಾಂತಿಯಿಂದ ಕೂಡಿರುವ ಮಾತು ಮಧುರ
ಕಿವಿಗೆ ಇಂಪು ಪೀಯೂಷಧಾರೆ ಹರಿಸುವುದು ಸುಖದ ಪೂರ
ಕುಡಿಯುತಿರಲು ಸಜ್ಜನರ ದುಃಖಗಳ ಕಳೆಯುತಿಹುದು ನಿತ್ಯ
ದುರಿತಗಳನು ಪರಿಹರಿಸುತಿಹುದು ಮುಖಚಂದ್ರ ಇದುವೆ ಸತ್ಯ
ಭಕ್ತಿಯೊಂದಿಗೆ ಮುಕ್ತಿ ಕೊಡುವೆ ಆನಂದತೀರ್ಥ ಗುರುವೆ
ನಿನ್ನ ಮುಖವ ಮನತಣಿಯೆ ನಿತ್ಯ ಅನವರತ ಎಂದು ಕಾಂಬೆ?

34)

ವೇದಾದಿಗಳಿಗೆ ವ್ಯಾಖ್ಯಾನ ಬರೆದೆ, ರೋಚಕವು ನಿನ್ನ ಭಾಷ್ಯ
ತಿಳಿಹೇಳು ನನಗೆ ಸತ್‌ಶಾಸ್ತ್ರ ಮಹಿಮೆ, ಬೇಡುವೆನು ನಿನ್ನ ಶಿಷ್ಯ
ಪೂರ್ವ ಸುಕೃತದಿಂ ಸದಾಚರಣದಿಂ ಚಿತ್ತಶುದ್ಧಿಯಿಹುದು
ಪೂರ್ವ ಪಕ್ಷಗಳ ಸಬಲ ಮಂಡಿಸುವ ಬಲವು ಕೂಡ ಇಹುದು
ತಪ್ಪು ಶ್ರವಣದಿಂ ಉಂಟು ಆದ ದುಃಖಗಳ ಕಿತ್ತಿಹಾಕು
ನಿನ್ನ ವ್ಯಾಖ್ಯೆ ಚಿರಕಾಲ ಕೇಳುವಾ ಭಾಗ್ಯ ನಮಗೆ ಬೇಕು.

35)

ರತ್ನ ಖಚಿತ ಆಸನದಿ ಕುಳಿತ ಹೇ ಮುಖ್ಯಪ್ರಾಣದೇವ
ಭಾವಿ ಬ್ರಹ್ಮನೇ ಪರಮ ಪೂಜ್ಯನೇ ನಮ್ಮನ್ನೆಲ್ಲ ಕಾವ
ವೇದಶಾಸ್ತ್ರ ಅಭಿಮಾನಿ ದೇವರಿಂ ನೀನು ಪೂಜೆಗೊಳುವೆ
ಸ್ವರ್ಗದಲ್ಲಿ ರಂಭಾದಿ ಚೆಲುವೆಯರ ನೃತ್ಯ ಸೇವೆ ಇರಲು
ನಿನಗೆ ಉಂಟು ಗಂಧರ್ವಗಾನ ಪ್ರತ್ಯೇಕ ದೇವ ಸಭೆಯು
ನಿನ್ನ ಹಿರಿಮೆ, ತವ ದಿವ್ಯ ಚರಿತೆ ಭಕ್ತರಿಗೆ ಅಮೃತ ನಿಧಿಯು.

36)

ಹಸಿವು-ನೀರಡಿಕೆ, ಜನನ-ಮರಣ ನರಕಾದಿ ಚಕ್ರದಲ್ಲಿ
ಸಿಲುಕಿ ಜನರು ಸಂಸಾರ ಸಾಗರದಿ ಮುಳುಗುತಿಹರು ಇಲ್ಲಿ
ಶರಣುಬಂದ ಸಜ್ಜನರ ಮೊರೆಯನ್ನು ನೀನು ಕೇಳಿ ಅಂದು
ಜಲಧಿಶಯನನಿಗೆ ನೀನು ಪ್ರಾರ್ಥಿಸಿರೆ, ಅವನು ಕೇಳಿ ಅಂದು
ಪರಾಶರನ ಸತಿ ಸತ್ಯವತಿಯಲ್ಲಿ ವ್ಯಾಸನಾಗಿ ಬಂದ
ದೇಹದಿಂದಲ್ಲ ಜ್ಞಾನ ಜ್ಯೋತಿ ಅವತಾರಗೊಂಡು ನಿಂದ.

37)

ರತ್ನರಾಶಿಯನು ಕುರುಡು ಜನರು ತಪ್ಪಾಗಿ ಚಯಿಸುವಂತೆ
ಅಧಮ ಜನರು ವೇದಾರ್ಥವನ್ನು ತಪ್ಪಾಗಿ ಗ್ರಹಿಸೆ ಅಂತೆ
ತಾನೆ ಮೂಲಗುರು ವೇದವ್ಯಾಸ ಸಜ್ಜನರ ಹಿತವ ಬಯಸಿ
ಶ್ರುತಿಯ ಸರಿ ಅರ್ಥ ಜಗಕೆ ತಿಳಿಸಿದನು ಬ್ರಹ್ಮಸೂತ್ರ ರಚಿಸಿ
ಮುಖ್ಯ ಪ್ರಾಣನಾ ಕೃಪೆಯ ಬಲದಿಂದ ವ್ಯಾಸರನ್ನು ಭಜಿಪೆ
ಜ್ಞಾನ ಲಭಿಸೆ ಗುರು ವ್ಯಾಸರನ್ನು ಪ್ರತಿ ನಿತ್ಯ ನಾನು ನಮಿಪೆ.

38)

ದೇವಗಣಕೆ ದುಸ್ಸಾಧ್ಯವಾದ ಗುರು ವ್ಯಾಸರಾಜ್ಞೆಯನ್ನು
ಕೋಟಿ ರಶ್ಮಿಗಳ ಮುಕುಟವಿರುವ ಶಿರದಲ್ಲಿ ಹೊತ್ತು ನೀನು
ದೇವಗಣದ ಪ್ರಾರ್ಥನೆಯ ಕೇಳಿ ಸುಲಭದಲಿ ಕಾರ್ಯ ಗೈದೆ
ವೇದ-ಉಕ್ತಿಗಳ ಎತ್ತಿ ಹಿಡಿಯೆ ಅವತಾರ ಧರಿಸಿ ಬಂದೆ
ಹಿರಿಯ ದಸ್ಯು ಮಣಿಮಂತ ಬರೆದ ದುರ್ಭಾಷ್ಯ ಖಂಡಿಸಿರುವೆ
ಬ್ರಹ್ಮಸೂತ್ರ ಸದ್ಭಾಷ್ಯ ಬರೆದು ಸತ್‌ತತ್ತ್ವ ಸಾಧಿಸಿರುವೆ.

39)

ದ್ವಿಜನಿಲಯವೆಂದು ಮೂಲೋಕ ಖ್ಯಾತ ಪಾಜಕದ ಕ್ಷೇತ್ರದಲ್ಲಿ
ವಾಯುದೇವ ಅವತಾರಗೊಂಡೆ ನಡುಮನೆಯ ವಿಪ್ರನಲ್ಲಿ
ಪರಿವ್ರಾಜರಾ ಗಡಣಕೆಲ್ಲ ನೀ ಸಾರ್ವಭೌಮನಾದೆ
ಬದರಿಕಾಶ್ರಮಕೆ ಹೋಗಿ ವ್ಯಾಸರನು ನಮಿಸಿ ಆಜ್ಞೆ ಪಡೆದೆ
ಅದನು ಪೂರೈಸಿ ಗೀತೆ ಮುಂತಾದ ಗ್ರಂಥ ಭಾಷ್ಯ ಬರೆದೆ
ಭಾರತಾರ್ಥಪ್ರಕಾಶವೆಂಬ ತಾತ್ಪರ್ಯ ಗ್ರಂಥ ಮೆರೆದೆ.

40)

ದೇವ ವೃಂದದಿಂ ಸೇವೆ ಪಡೆವ ಮಹಿಮನಿಗೆ ನಿತ್ಯ ನಮನ
ಈಶನಲ್ಲಿ ಶ್ರೀಯಲ್ಲಿ ನಿಯತ ತಲೆ ಬಾಗುವವಗೆ ನಮನ
ಪೂರ್ಣಪ್ರಜ್ಞ ಆನಂದತೀರ್ಥ ಸದ್ಗುರುವೆ ನಿನಗೆ ನಮನ
ಪುಣ್ಯ ಗಂಗೆಯಾ ಉದಕದಲ್ಲಿ ನಿತ ಸ್ನಾನ ಗೈದ ಪುಣ್ಯ
ಅದಕು ಹಿರಿದಹುದು ನಿನ್ನ ಶ್ರವಣ ದರುಶನದಿ ದೊರೆವ ಪುಣ್ಯ
ಭವದ ಭಯವ ಹರಿಸುತ್ತ ಸಜ್ಜನರ ಮೋದಿಸುವಗೆ ನಮನ.



41)

ಲಿಕುಚ ವಂಶಜನು ಸುಬ್ರಮಣ್ಯ ಸೂರಿಗಳ ಪುತ್ರ ನಾನು
ದೇವ ಕೇಶವನ ಮಧ್ವ ಗುರುವಿನಽ ಚರಣ ಭಕ್ತ ನಾನು
ಭಕ್ತ ಜನರ ಪಾಪಗಳ ಹರಿಸೆ ಹರಿ-ವಾಯು-ಗುರುಗಳನ್ನು
ಸ್ತುತಿಸಿ ರಚಿಸಿದೆ ಶಬ್ದ ಕುಸುಮಗಳ ಗಂಧ ಮಾಲೆಯನ್ನು
ದೇವ ಕೇಶವಾನಂದತೀರ್ಥ ಗುರು ಪಾದ ಸೇವಿಸುವರು
ಸುಮನ ಮಾಲೆ ಅರ್ಪಿಸುತ ಭಜಿಸೆ ನಿಜಮುಕ್ತಿ ಪಡೆಯಲಿಹರು.

– ಸಮಾಪ್ತಿ

---

## ಅನುವಾದಕರ ನುಡಿ:

ತಾಯಿ ರುಕ್ಮಿಣಿ, ತಂದೆ ವಿಠ್ಠಲರ ಜೇಷ್ಠ ಪುತ್ರ 'ಜೀವಿ'
ಹರ್ಷ-ರಾಘವರ ತಂದೆ ನಾನಿರುವೆ ಸುಮನ ಕಲಾ-ಜೀವಿ
ಲಿಕುಚ ಕುಲದ ತ್ರಿವಿಕ್ರಮಾರ್ಯ ಪಂಡಿತರು ಬರೆದ ಕಾವ್ಯ
'ವಾಯುಸ್ತುತಿ' ಯ ಕನ್ನಡಕೆ ತಂದಿಹೆನು ಸ್ತೋತ್ರವಿಹುದು ದಿವ್ಯ
ಶ್ರೀಗಳಾದ ವಿಶ್ವೇಶತೀರ್ಥರಿಂ ಸ್ಫೂರ್ತಿಯನ್ನು ಪಡೆದೆ
ಒಳಗೆ ಕುಳಿತು ಹರಿ-ವಾಯು-ಗುರು ನುಡಿಸೆ, ಅದನೆ ಕೇಳಿ ಬರೆದೆ.

– ಜೀವಿ

---

## ಶ್ರೀಮನ್ನಖಸ್ತುತಿ

॥ ಓಂ ॥ ಲಕುಮಿ ಸಹಿತ ಸರ್ವತ್ರವ್ಯಾಪ್ತ ನರಸಿಂಹದೇವ ಪ್ರಭುವೇ
ನಿನ್ನ ನಖದ ಮಹಿಮೆಯನು ಎಂತು ಬಣ್ಣಿಸಲಿ ನಾನು ವಿಭುವೇ
ಇಂದ್ರವೈರಿ ಮದಮತ್ತದೈತ್ಯ ಕರಿ-ಕುಂಭದಂತೆ ಇರುವ
ಉಚ್ಚ ಅದ್ರಿಗಳ ತುಂಡು ಮಾಡುವಾ ವಜ್ರದಂತೆ ಇರುವ
ನಿನ್ನ ಉಗುರು ಕಾಮಾದಿ ಶತ್ರು, ಅಜ್ಞಾನ ತೊಲಗಿಸುವುದು
ದೇವಗಣದ ಧ್ಯಾನಕ್ಕೆ ಯೋಗ್ಯ ಪ್ರಸನ್ನ ದೀಪ್ತಿ ಇಹುದು
ನಿನ್ನ ನಖಗಳನು ಸ್ತುತಿಸುತಿರುವೆ ನರಸಿಂಹದೇವ ನೋಡು
ಸುಜನ ರಕ್ಷಿಸುತ ನಮ್ಮ ವೈರಿಗಳ ಮೂಲ ನಾಶ ಮಾಡು.

2)

ದೇಶಕಾಲಗಳ ವೇದಶಾಸ್ತ್ರಗಳ ಬಗೆದು ಹುಡುಕಿ ನೋಡೆ
ನಿನಗೆ ಸಮನಾದ ವಸ್ತು ದೊರೆಯದು ಸ್ತುತಿಯ ಮಾಡಿ ಹಾಡೆ
ನಿನ್ನ ನಾಮದಾ ರುಚಿಯೆ ಬೇರೆ ಎಂಟನೆಯ ರಸವು ತಾನು
ಲಕುಮಿ-ಕಾಂತನೆ, ಪರಮಸತ್ಯನೇ, ಸ್ತುತಿಸುತಿಹೆನು ನಾನು
ರೋಷದಿಂದ ಬಲಗಣ್ಣ ಕಡೆಯ ಕಿಡಿ ಪ್ರಳಯ ಜ್ವಾಲೆ ಜನಿಸೆ
ಬ್ರಹ್ಮ-ರುದ್ರ-ಇಂದ್ರಾದಿ ದೇವಗಣ ದೀಪ ಹುಳದಿ ಜ್ವಲಿಸೆ
ನೀನೆ-ಸೃಷ್ಟಿ-ಸ್ಥಿತಿ-ಲಯದ ಕಾರಕ ನೀನೆ ಸರ್ವಶಕ್ತ
ನೀನೆ ಸರ್ವೇಶ, ನೀನೆ ಉತ್ತಮನು, ನಾನೊ ನಿನ್ನ ಭಕ್ತ.

**ಶ್ರೀಮನ್ನಖಸ್ತುತಿ ಸಮಾಪ್ತಿ**

**His Holiness Sri Vishwesha Teertha Swamiji of Pejavar Adhokshaja Mutt, Udupi,** is a Seer and Visionary of great distinction. While he is a renowned Spiritual Master, his uniqueness lies in combining the rich Madhva tradition with great innovations of modernity, in the cause of preservation of the human race and developing a new society, permeating eternal human values. Swamiji is a pragmatic Seer, who is not only dedicated to the cause of moulding the disciples in the path of *Madhva-mata* but also in shaping socio-economic deliverance of the underprivileged. He guides people with a victory mark of two fingers which symbolize 'Duty' and 'Devotion'; duty towards the society and devotion for the Supreme Lord Sri Krishna.

When Swamiji was seven-year old, he was chosen to be the successor by H. H. Sri Vishwamanya Teertha Swamiji of Pejavar Mutt and was given the *'Sanyasa Diksha'.* This bala-sanyasin was groomed to become an outstanding scholar by H. H. Sri Vidyamanya Teertha Swamiji of Bhandarkere Palimar Mutt. When he was hardly eighteen, Swamiji founded Madhva Maha Mandal and at twnetyfive he started Poorna Prajna Vidya Peetha, a gurukula, to impart Vedantic knowledge to students.

Swamiji undertook several activities for the revival of *'Sanatana Dharma'* and welfare of the community with the active support of H. H. Sri Vidyamanya Teertha Swamiji, such as :

★ Students' Hostel at Bangalore, Mysore, Gulbarga, Raichur, Udupi, Davangeri, Hubli, Dharwad, Gadag, Bagalkot, Bijapur, Belgaum, Mumbai which provide boarding and lodging facilities to deserving students.
★ Krishna Sevashrama, Bangalore, a well-equipped 50-bedded hospital.
★ A monthly journal 'Tattwavada' in Kannada, Telugu and English.
★ Free and Loan Scholarship Scheme for the professional courses.
★ Publication of Sarvamoola Granthas and scholarly studies in Madhva philosophy.
★ An Orphanage at Udupi.
★ A Dharmashala at Badri, dormitory and puja mandirs at Tirupati and Bhuvaneshwar.
★ A Vriddhashrama at Karjigi (Dharwad Dist.)
★ The latest one is the installation of **'Sri Vidyamanya Prashasti'** for an outstanding Madhva scholar. This award carries a purse of one lakh with a citation, in the manner of Jnana Peetha Award.

**Dr. G. V. Kulkarni (Jeevi)** is a renowned poet, playwright in Kannada. He got his M. A. (Kannada & Sanskrit) and LL.B. from Karnatak University. He got M. A. and Ph.D. from Bombay University in English literature. His doctoral dissertation - "Sri Aurobindo's Influence on the Writings of Vinayak Krishna Gokak" - has paved a new path in Comparative Literature.

"Jeevi" has published five poem collections *(Madhusanchaya, Hucha-Huchchi, Nalku Dhwani, Sanjivini, Dashapadi),* one short story collection *(Dhrutarastra Santan*), two one-act-play collections *(Prajaprabhutwa, Gundana Maduve),* one novel *(Vyatheyadalu Hudugi).* He has recited poems and presented papers in several all India Literary Conferences.

He is closely associated with Kannada literary giants and Jnana Peetha Awardees, Mahakavi D. R. Bendre and Dr. V. K. Gokak and extensively written on their works.

Prof. G. V. Kulkarni teaches Kannada and English in M. V. & L. U. College, Andheri East, Mumbai.

"Jeevi" is interested in Yoga and Naturopathy and champions the cause of drugless therapy. He is closely associated with Dr. K. S. Sharma Institute of Naturopathy and Yogic Sciences, Hubli. He is the editor of "Godbye Doctor" - a Publication devoted to Naturopathy and Yoga.

Jeevi's Kannada and English translation of Trivikrama Panditacharya's Sri Narasimha Stuti was published in 1993. It was well received by the pundits and the public.

The present venture of Jeevi is the translation of Trivikrama Panditacharya's Sanskrit work SRI VAYUSTUTI in Kannada and English and has been blessed by His Holiness Sri Vishwesha Teertha Swamiji of Pejavar Adhokshaja Mutt. This work breaks a new ground in spiritual literature.

*"In Madhva tradition, in prayer as well as in worship, Vayustuti has an important place. The followers of Madhva philosophy treat Vayustuti as a sacred Mantra. No daily ritual is complete without chanting of Vayustuti.*

*Shri G. V. Kulkarni has translated it (Vayustuti) in Kannada and Englsih verse so that we could imbibe the profound meaning of Vayustuti in addition to the benefits we derive by daily recitation. Shri G. V. Kulkarni has shown his literary skill and ability by translating profound - serious poetry of Vayustuti into liltng charming Kannada - English verse. We admire the literary wonder which has transformed* Narikelapaka *into* Drakshapaka*".*

**★ H. H. Sri Vishwesha Teertha Swamiji,**
Pejawar Adhokshaja Mutt.

*"Amongst strotras of Madhva Sampradaya the recitation of Dvadasa stotra of Acharya Madhva himself and Vayustuti of Trivikrama have become indispensable parts of the daily worship of every devout Madhva householder.*

*G. V. had done his best to mirror their contents to the best of his abilities in a spirit of homage and has succeeded remarkably well in enabling the reader to share his thoughts and taste Kavyarasa, Jnanarasa and Bhaktirasa of the mighty work through his word - painting in Kannada and English in a poetic garb."*

**★ Dr. B. N. K. Sharma,**
Sri Vidyamanya Prashasti winner

*"By attempting to translate the Narasimha Stuti earlier, and now the Vayustuti of Trivikrama Panditacharya, he (Jeevi) has exhibited an adventure of consciousness which is a good augury for Kannada poetry.*

*As this Kannada version of Sri Vayustuti flows like a stream of crystal clear water, it is difficult to imagine the penance and hard work undergone during the process of translation. Those who are familiar with the original Vayustuti know very well the difficulties in understanding the text because of its roaring compounds and hard syntax and stylistic features. I deem it as Jeevi's adventure of consciousness which has enabled him to succeed in his effort of translation."*

**★ Prof. R. G. Kulkarni,**
Critic and poet

**Trivikrama Panditacharya's**

# SRI VAYUSTUTI

# ಶ್ರೀ ವಾಯುಸ್ತುತಿ

# ॥ श्री वायुस्तुतिः ॥

**(English and Kannada rendering by Jeevi)**

**ANANDA TEERTHA PRATISHTHANA**
**Bangalore - 560 028.**